ಮಿಂಚಿನ ಬಳ್ಳಿಯ ೧೨ನೆಯ ವರ್ಷದ ೪ನೆಯ ಕುಡಿಯು

ಓಂ

ಸಾ ವಿದ್ಯಾ ಯಾ ವಿಮುಕ್ತಯೆ ।

( ಭಕ್ತಿ

# ಸುಮನಾಂಜಲಿ )

ಅರ್ಪಿಸಿದವರು :

ಮ. ಶ್ರೀ. ದೇಶಪಾಂಡೆ, ಎಂ. ಎ.

ಅಥಣಿ

ಉತ್ತಮ ಪ್ರತಿ ೩-೦-೦ [೧೯೫೦] ಸಾದಾಪ್ರತಿ ೨-೮-೦

ಓಂ

— ಅಥ —

ಶರಣು!

ಈಶ್ವರಃ ಸರ್ವಭೂತಾನಾಂ
ಹೃದ್ದೇಶೇಽರ್ಜುನ ತಿಷ್ಠತಿ |
ಭ್ರಾಮಯನ್ ಸರ್ವಭೂತಾನಿ
ಯಂತ್ರಾರೂಢಾನಿ ಮಾಯಯಾ || ೧ ||

ತಮೇವ ಶರಣಂ ಗಚ್ಛ
ಸರ್ವಭಾವೇನ ಭಾರತ |
ತತ್ ಪ್ರಸಾದಾತ್ಪರಾಂ ಶಾಂತಿಂ
ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ || ೨ ||

—ಶ್ರೀಗೀತಾ

ಆಕಾಶಾತ್ಪತಿತಂ ತೋಯಮ್
ಯಥಾ ಗಚ್ಛತಿ ಸಾಗರಮ್ |
ಸರ್ವದೇವ ನಮಸ್ಕಾರಃ
ಭಗವಂತಂ ಪ್ರತಿಗಚ್ಛತಿ || ೩ ||

ನಾಹಂ ಕರ್ತಾ ಹರಿಃ ಕರ್ತಾ |
ತತ್ಪೂಜಾ ಕರ್ಮಚಾಖಿಲಮ್ || ೪ ||

ಯದ್ಯತ್ಕರ್ಮ ಕರೋಮಿ ತತ್ತದಖಿಲಮ್ |
ಶಂಭೋ ! ತವಾರಾಧನಮ್ || ೫ ||

ಓಂ

ಅರ್ಪಣ

'ಪರಮಾತ್ಮನನುಭಾವ ನರರಿಂಗೆ ನೀಡಲು
ಸುರಲೋಕದಿಂ
**ವರನಾಮ**
ತಂದು'
ಆಧುನಿಕ ಕನ್ನಡ ನಾಡಿನಲ್ಲಿ
ನಿಜಪರಮಾರ್ಥದ
ಬೀಜವ
ಬಿತ್ತಿ
'ಹಿರಿ ಗುರುಗಳಾದ'
**ಶ್ರೀ ನಿಂಬರಗಿ ಮಹಾರಾಜರವರ**
ಅಡಿದಾವರೆಗಳಲ್ಲಿ.

## ಪರಮ

## ಮಾನವ ಧರ್ಮ

ಪರಮಾರ್ಥಸಾಧನವೆ ಪರಮ ಮಾನವ ಧರ್ಮ ।
ಅದನು ಗಮನಿಸಿಯೆಲ್ಲ ಮಾಡಬೇಕು ॥
ಪರಮಾರ್ಥಕನುಕೂಲವಿರುವದನು–ಇರುವನಿತು ॥
ಮಾಡುತಾತ್ಮನ ನೆನೆದು ಬೆರೆಯಬೇಕು ॥ ೧ ॥

—ನಿಂಬರಗಿ ಮಹಾರಾಜ

ಹರಿಃ ಓಂ

## ಸಂಪಾದಕರ ಮಾತುಗಳು

'**ಭಕ್ತಿ ಸುಮನಾಂಜಲಿಯು**' ಈ ವರುಷದ ಕೊನೆಯ ಕುಡಿಯು. ಈ ಪುಸ್ತಕವು ಅಗಷ್ಟ ತಿಂಗಳಿನಲ್ಲಿಯೇ ಹೊರಬೀಳಬೇಕಿದ್ದಿತು. ಆದರೆ ಭಾರತದ ಮುಂಬರುವ ಚುನಾವಣೆಯ ಮತದಾರರ ಯಾದಿಯು ಧಾರವಾಡದ ಎಲ್ಲ ಮುದ್ರಣಾಲಯಗಳನ್ನು ವ್ಯಾಪಿಸಿದ್ದರಿಂದ ಅನಿವಾರ್ಯವಾಗಿ ನಮ್ಮ ಪ್ರಕಟನೆಯು ಮುಂದೆ ಬೀಳಬೇಕಾಯಿತು. ಇದಕ್ಕಾಗಿ ವಾಚಕರು ಕ್ಷಮಿಸುವರೆಂದು ನಂಬಿರುವೆ. ಆದರೆ ನಮ್ಮ ಹೊಸ ವರುಷದ ಹೊಸ ಸಂಚಿಕೆಯು ವಿಜಯದಶಮಿಗೆ ನಿಶ್ಚಿತವಾಗಿ ಹೊರಬೀಳುವದು.

ಈ ವರುಷ ಬಳ್ಳಿಯ ಆರ್ಥಿಕ ಸ್ಥಿತಿಯು ತೀರ ಕೆಳಮಟ್ಟಕ್ಕಿಳಿದಿದೆ. ಸುಮಾರು ಎರಡುಸಾವಿರ ರೂಪಾಯಿಗಳ ಪೆಟ್ಟು ಬಿದ್ದಿದೆ. ಈ ಹೊಡೆತ್ನದಿಂದ ಚೇತರಿಸಿಕೊಳ್ಳುವದು ಕಷ್ಟವಾಗಿದೆ. ಕನ್ನಡ ಜನಾಂಗವು ಮನಸು ಮಾಡಿದರೆ ಬಳ್ಳಿಯು ಬಾಳಿ ಬೆಳೆದು ಕುಡಿಗಳನ್ನು ಬಿಡುವದರಲ್ಲಿ ಸಂಶಯವಿಲ್ಲ. ಕನ್ನಡಿಗರ ಉದಾರತೆಯ ಮೇಲೆ ವಿಶ್ವಾಸವಿಟ್ಟು ಮುಂದೆ ಸಾಗುತ್ತಲಿದ್ದೇನೆ.

**ಭಕ್ತಿ ಸುಮನಾಂಜಲಿ**ಯನ್ನು ಸಂಗ್ರಹಿಸಿದವರು ನನ್ನ ಆಪ್ತಮಿತ್ರರಾದ ಶ್ರೀಮಾನ್ ಮನೋಹರರಾವ ದೇಶಪಾಂಡೆಯವರು. ಇವರು ಕನ್ನಡಿಗರಿಗೆ ಚಿರಪರಿಚಿತರು, ವಿದ್ವಾಂಸರು, ಸಾಧಕರು, ಆಧ್ಯಾತ್ಮವಾದಿಗಳೆಂದು ಖ್ಯಾತಿಪಡೆದ ಪ್ರೊ. ರಾನಡೆಯವರ ಶಿಷ್ಯರು. ಆ ಸಾಂಪ್ರದಾಯದ ಭಕ್ತರು. ಅವರ ಬೆಳಕಿನಲ್ಲಿಯೇ ತಮ್ಮ ಜೀವನವನ್ನು ನಡೆಯಿಸಿದವರು. ಕನ್ನಡನಾಡಿನ ಅನುಭಾವಿಗಳ ತಪೋವನದಲ್ಲಿ ಹೊಕ್ಕು, ಸುಮನಗಳನ್ನು ಸಂಗ್ರಹಿಸಿ ಕನ್ನಡಿಗರಿಗೆ ಅಂಜಲಿಯನ್ನು ಅರ್ಪಿಸಿದ್ದಕ್ಕಾಗಿ ನಾವು ಅವರಿಗೆ ತುಂಬ ಋಣಿಯಾಗಿದ್ದೇವೆ.

ನಮ್ಮ ಸ್ವತಂತ್ರ ಭಾರತವು ಜಗತ್ತಿನಲ್ಲಿ ಬಾಳಿ ಬೆಳೆಯಬೇಕಾದರೆ ಅದು ಭದ್ರವಾದ ಆಧ್ಯಾತ್ಮ ತಳಹದಿಯ ಮೇಲೆಯೆ ಪುನರುಜ್ಜೀವನಗೊಳ್ಳಬೇ

ಕೆಂಬುದೇ ಬಯಕೆ. ವಿವಿಧ ಜಾತಿ–ಮತ–ಸಾಂಪ್ರದಾಯುಗಳನ್ನು ಹೊಂದು ಗೂಡಿಸಿ ಏಕರಾಷ್ಟ್ರೀಯತೆಯನ್ನು ಉಂಟುಮಾಡಲು ಕೇವಲ ಭೌತಿಕವಾದವು ಅಸಮರ್ಥವಾಗಿದ್ದು ವಿಶ್ವದ ವಿವಿಧತೆಯಲ್ಲಿ ನಿಂತು ಸರ್ವಭೂತಾಂತರಾತ್ಮನಾಗಿ **ಸೂತ್ರೇಮಣಿಗಣಾಯಿವ** ಎಂಬಂತೆ ಜಗತ್ತಿನ ಸರ್ವಶಕ್ತಿಗಳ ಧಾರಣಮಾಡಿ, ಅವೆಲ್ಲವುಗಳನ್ನು ಪ್ರಚೋದಿಸುವ ಆ ಪರಮಾತ್ಮಶಕ್ತಿಯೊಂದೇ ಅದಕ್ಕೆ ಸಮರ್ಥವು ಎಂಬ ಸತ್ಯವನ್ನರಿತು ಅದನ್ನು ಹೊಂದಿ ಅದರ ಪ್ರೇರಣೆಯಿಂದ ನಡೆದು ನುಡಿದಾಗಲೇ ಜಗತ್ತಿಗೆ ಶಾಂತಿ. ಮಾನವಕುಲದ ಕಲ್ಯಾಣ. ಸರ್ವಭೂತಹಿತ.

ಹಿಂದೆ ಭಾರತೀಯರು ಈ ಸಂಗತಿಯನ್ನರಿತು ಶ್ರೀಹರಿಯ ಉಪಾಸನೆಗೈದು ಅವನ ಪ್ರಸಾದವನ್ನು ಪಡೆದು ಭಾರತವನ್ನು ಈ ಶಕ್ತಿಯಿಂದ ಸಂಘಟಿಸಿ ಅದರಲ್ಲಿ ಏಕಸೂತ್ರತೆಯನ್ನುಂಟುಮಾಡಿ ಜನರ ಅಂತಃಕರಣವನ್ನರಳಿಸಿ ಸರ್ವವಿಧದಲ್ಲಿಯೂ ಉನ್ನತಿಯ ಮಟ್ಟಕ್ಕೆ ಮುಟ್ಟಿಸಿದ್ದ ಸಂಗತಿಯನ್ನು ನಮ್ಮ ಇತಿಹಾಸವು ಸಾರುತ್ತಿದೆ. ಅನೈಕ್ಯದಿಂದ ಬಳಲುತ್ತಿರುವ ಭಾರತಕ್ಕೆ ನಮ್ಮ ಆಧ್ಯಾತ್ಮವಾದಿಗಳ ಈ ರಾಜಮಾರ್ಗವೇ ಮದ್ದು. ಇದನ್ನೇ ನಮ್ಮ ಮನೋಹರರಾಯರು ತಮ್ಮ ಪ್ರಸ್ತಾವನೆಯಲ್ಲಿ ಬಿಂಬಿಸಲು ಪ್ರಯತ್ನಿಸಿದ್ದಾರೆ.

**ಈ ಸುಮನಾಂಜಲಿ**ಯಲ್ಲಿ ದ್ವೈತ. ಅದ್ವೈತ, ವಿಶಿಷ್ಟಾದ್ವೈತ, ವೀರಶೈವ, ಜೈನ ಮೊದಲಾದ ಎಲ್ಲ ಅನುಭಾವಿಗಳ ಪದ ಪದ್ಯಗಳ ಸಂಗ್ರಹವನ್ನು ಮಾಡಲಾಗಿದೆ. ವೇದಕಾಲದಿಂದಲೂ ಈ ಆಧ್ಯಾತ್ಮ ಪ್ರವಾಹವು ಹೇಗೆ ಹರಿದು ಬಂದಿದೆಯೆಂಬದನ್ನು ತೋರಿಸಲಾಗಿದೆ. ಆತ್ಮವಿಕಾಸದ ಮೆಟ್ಟಲುಗಳನ್ನು ತೋರಿಸಲು ಹವಣಿಸಲಾಗಿದೆ. ಸಮನ್ವಯ ದೃಷ್ಟಿಯಿಂದ ಅನುಭವ ಸಾಮ್ಯವನ್ನು ತೋರಿಸಲು ಪ್ರಯತ್ನಿಸಲಾಗಿದೆ. ಕೆಲವಿಷಯಗಳಲ್ಲಿ ಅನುಭವಸಾಮ್ಯವು ಕಂಡುಬರುತ್ತಿದೆ. ಕೆಲವು ವಿಷಯುಗಳಲ್ಲಿ ವೈವಿಧ್ಯತೆಯು ಒಡೆದು ಕಾಣುತ್ತಿದೆ. ಅದೂ ಒಂದು ಬಗೆಯ ಅಂದವೇ. ಅದೇ ಸೃಷ್ಟಿಕರ್ತನ ಚಮತ್ಕೃತಿ.

‘ ಧರ್ಮಪ್ರಧಾನವಾದ ಅಂಗಗಳು ಮೂರು. ತತ್ವಜ್ಞಾನ, ನೀತಿ, ಅನುಭವ ಈ ಮೂರರೊಳಗೆ ತತ್ವಜ್ಞಾನದಲ್ಲಿ ಸಮನ್ವಯವಾಗುವದು ಸುಲಭಸಾಧ್ಯವಲ್ಲ’ ಎಂಬ ಸತ್ಯವನ್ನು ಕಂಡು ರಾಯರು ಸ್ವಲ್ಪ ತಲ್ಲಣಗೊಂಡಂತೆ

ಕಾಣುತ್ತಿದೆ. ಇದಕ್ಕೆ ಬೆದರುವ ಕಾರಣವಿಲ್ಲ. ಈ ವಿಚಾರಗಳ ಪ್ರವಾಹವು ಅನಾದಿಕಾಲದಿಂದಲೂ ಹರಿದು ಬಂದಿದೆ. ಆದುದರಿಂದಲೇ ಮತಪ್ರವರ್ತಕರಲ್ಲಿ, ದರ್ಶನಕಾರರಲ್ಲಿ ಭಿನ್ನತೆಯು ಕಂಡುಬರುತ್ತದೆ. ಈ ವಿವಿಧತೆಯಲ್ಲಿಯೂ ಏಕಸೂತ್ರತೆಯು ಕಾಣುತ್ತಿದೆ. ಆಸ್ತಿಕರಾದ ಈ ಎಲ್ಲ ವಾದಿಗಳಿಗೆ ಪರಮಾತ್ಮನೇ ಈ ಜಗತ್ತಿಗೆ ಮೂಲವೆಂಬ ಮಾತು ಸರ್ವಸಮ್ಮತವಾಗಿದೆ. ಅವನೇ ಎಲ್ಲಕ್ಕೂ ಪ್ರೇರಕ. ಆದುದರಿಂದ ವಿಶಾಲವಾದ ಆತ್ಯಂತಿಕ ಸಹಿಷ್ಣುತೆಯಿಂದ ಸುಜ್ಞಾನದಿಂದ ಮುಂದೆ ಸಾಗುವದೊಂದೆದಾರಿ.

ಸತ್ಯಸಾಕ್ಷಾತ್ಕಾರಕ್ಕಾಗಿ ವಿಚಾರಮಂಥನವು ಆವಶ್ಯಕ. ಅದರೆ ವಾದಕ್ಕಾಗಿ ವಾದ. ತರ್ಕಕ್ಕಾಗಿ ತರ್ಕ. ಅಹಂಭಾವ ಮಿಶ್ರಿತವಾದ ಆಗ್ರಹದ ವಾದಗಳು ಮಾತ್ರ ಸಮಾಜದಲ್ಲಿ ಅನೈಕ್ಯವನ್ನುಂಟು ಮಾಡುತ್ತವೆ. ಪರಾತ್ಪರ ಸತ್ಯವನ್ನರಿಯುವ ಜಿಜ್ಞಾಸೆಯು ನಮ್ಮನ್ನು ಮೇಲಕ್ಕೊಯ್ಯುತ್ತದೆ. ತತ್ವ ನಿಶ್ಚಿತವಾದಾಗಲೇ ಮಾನವನಲ್ಲಿ ದೃಢವಾದ ಶ್ರದ್ಧಾಭಕ್ತಿಗಳು ಉಂಟಾಗುವವು. ಜ್ಞಾನಸೂರ್ಯನ ದರ್ಶನವಾಗುವದು; ಕತ್ತಲೆಯು ಹರಿಯುವದು; ಭಕ್ತಿ ಕರ್ಮಗಳು ಜ್ಞಾನಕ್ಕೆ ಸಾಧನಗಳು. ಈ ಜ್ಞಾನದ ಅರ್ಥಾತ್ ತತ್ವನಿಶ್ಚಯದ ಹಿನ್ನೆಲೆಯಿಲ್ಲದ ಭಕ್ತಿ ಕರ್ಮಗಳು ಅಂಧಾನುಕರಣವಾಗಿ ಪರಿಣಮಿಸುವ ಸಂಭವವು ಹೆಚ್ಚಾಗಿದೆ.

ಈ ಬಗೆಯಾಗಿ ಶಂಕರ, ರಾಮಾನುಜ, ಮಧ್ವ ಬಸವ ಮೊದಲಾವ ತತ್ವಜ್ಞಾನಿಗಳು ಉದಯಿಸಿ ಅಜ್ಞಾನದ ಅಂಧಃಕಾರನ್ನು ಓಡಿಸಿದಾಗಲೇ ನಾಡಿನಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ವೀರಶೈವ, ಜೈನ ಮೊದಲಾದ ಅನೇಕ ಅನುಭಾವಿಗಳು ನಮ್ಮ ನಾಡಿನಲ್ಲಿ ಬೆಳಕಿಗೆ ಬಂದರೆಂಬ ಐತಿಹಾಸಿಕ ಸತ್ಯತೆಯನ್ನೂ ನಾವು ನೋಡಬೇಕು.

ಆ ಪರಾತ್ಪರ ಶಕ್ತಿಯ ಪ್ರಸಾದವಾಗಬೇಕಾದರೆ ಭಕ್ತಿಜ್ಞಾನಗಳೇ ಮುಖ್ಯ 'ಭಕ್ತಿಶ್ಚತತ್‌ಸಾಧನಂ' ಎಂದು ಶ್ರೀಮದಾಚಾರ್ಯರು ಸಾರಿದ್ದಾರೆ.

ಮಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ ।
ಸ್ನೇಹೋಭಕ್ತಿರಿತಿಪ್ರೋಕ್ತಃ ತಯಾಮುಕ್ತಿರ್ನಚಾನ್ಯಥಾ ॥

ಎಂದು ಹೇಳಲಾಗಿದೆ. ಈಪರಿಯ ಆಸಕ್ತಿಯೆ ಭಕ್ತಿ.

ಇದೇ ಬಗೆಯಾಗಿ ಶ್ರೀಕೃಷ್ಣ ಪರಮಾತ್ಮನು
ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾ ಕ್ಷರಯೇವಚ ।
ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ ॥
ಉತ್ತಮಃ ಪುರುಷ ಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಏತದ್‌ಬುದ್ಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ ॥
—ಗೀತಾ

ಎಂದು ಜ್ಞಾನದ ಸ್ವರೂಪವನ್ನು ಸ್ಪಷ್ಟಶಬ್ದಗಳಲ್ಲಿ ಹೇಳಿದ್ದಾನೆ ಜಡ ಹಾಗೂ ಚೇತನ ಪ್ರಕೃತಿಗಳಿಗಿಂತಲೂ ಭಿನ್ನನಾದಂಥ-ಶ್ರೇಷ್ಠನಾದಂಥ-ಸರ್ವವನ್ನೂ ವ್ಯಾಪಿಸಿದಂಥವನೇ ಪರಮಾತ್ಮನು-ಪುರುಷೋತ್ತಮನು ಎಂದು ಕರೆಯಿಸಿ ಕೊಳ್ಳಲ್ಪಡುತ್ತಾನೆ. ಇದೇ ನಿಜವಾದ ಜ್ಞಾನ.

ನಾವು ಮಹಾತ್ಮ್ಯಜ್ಞಾನಪೂರ್ವಕವಾಗಿ ಈ ಪರಾತ್ಪರನಾದ ಈ ಪುರುಷೋತ್ತಮನ ಅನುಗ್ರಹವನ್ನು ಭಕ್ತಿಯಿಂದ ಪಡೆದು ಅವನನ್ನು ಹೊಂದಿ ಅವನ ಪ್ರೇರಣೆಯಂತೆ ನಡೆದು ನುಡಿದು ನಮ್ಮ ಬಾಳನ್ನು ಬೆಳಗುವದೇ ನಮ್ಮ ಇತಿಕರ್ತವ್ಯ. ಭಕ್ತಿಸುಮನಾಂಜಲಿಯು ಕನ್ನಡಿಗರಲ್ಲಿ ಈ ಬಗೆಯ ಭಾವನೆಯನ್ನು ಉಂಟುಮಾಡಲೆಂದು ಬಯಸುತ್ತೇನೆ.

ಮನೋಹರರಾಯರ ಬರವಣಿಗೆಯು ಅತ್ಯಂತ ಮನೋಹರವೂ ಮೋಹಕವೂ ಆಗಿದೆ. ಈ ಬರವಣಿಗೆಯೇ ಅವರ ಈ ಸಾಹಿತ್ಯದ ಆಳವಾದ ಅಭ್ಯಾಸವನ್ನು ಸೂಚಿಸುತ್ತಿದೆ. ಕನ್ನಡಿಗರು ಇದರ ಸದುಪಯೋಗವನ್ನು ಮಾಡಿಕೊಳ್ಳುವರೆಂದು ಆಶಿಸುತ್ತೇನೆ.

ಶ್ರೀಮಾನ್ ಮಾನ್ಯ ಮಂತ್ರಿಗಳಾದ ದಿವಾಕರ ರಂಗರಾಯರು ಮುನ್ನುಡಿಯನ್ನು ಬರೆದು ಸುಮನಾಂಜಲಿಗೆ ಒಂದು ಬಗೆಯ ಕಳೆಯನ್ನು ಕಟ್ಟಿದ್ದಾರೆ. ಅವರ ಅಂತಃಕರಣಪೂರ್ವಕವಾದ ಆಶೀರ್ವಾದವು ಕನ್ನಡನಾಡಿನಲ್ಲಿ ಸುಬುದ್ಧಿಯನ್ನು ಪ್ರೇರಿಸಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ. ಮುನ್ನುಡಿಯನ್ನು ಬರೆದುಕೊಟ್ಟದ್ದಕ್ಕಾಗಿ ಅವರಿಗೆ ಬಳ್ಳಿಯು ಚಿರ ಋಣಿಯಾಗಿದೆ.

ಆಶ್ವಿಜ ಶುದ್ಧ ಪ್ರತಿಪದ
೧೨-೧೦-೧೯೫೦

ತಮ್ಮ ಬಂಧು
**ಬುರ್ಲಿ ಬಿಂದುಮಾಧವ**

# ನಾಲ್ಕು ಮಾತು

ಶ್ರೀ. ದೇಶಪಾಂಡೆ ಮನೋಹರರಾಯರ ಹೆಸರು ಕನ್ನಡ ವಾಚಕ ವೃಂದಕ್ಕೆ ಚನ್ನಾಗಿ ಪರಿಚಿತವಿರುವದು. ಅವರ ಲೇಖನಿಯು ಕನ್ನಡ ಸೇವೆಯನ್ನು ಈವರೆಗೆ ಚನ್ನಾಗಿ ಮಾಡಿದೆ, ಮುಂದೆಯಾದರೂ ಅವರಿಂದ ಹೆಚ್ಚಿನ ಸೇವೆಯ ಅಪೇಕ್ಷೆ ಇದೆ. ಅವರು ಕೇವಲ ವಿದ್ವಾಂಸರಲ್ಲ. ಅದೊಂದು ಸದ್ಭಾವ ಪ್ರೇರಿತವಾದ ಸಜ್ಜೀವ ಎಂದು ಹೇಳಬಹುದು. ಅವರಲ್ಲಿ ತತ್ವಜ್ಞಾನವಷ್ಟೇ ಇಲ್ಲ, ಕಾವ್ಯಶಕ್ತಿಯೂ ಮನೆಮಾಡಿದೆ. ಸನ್ಮಾರ್ಗವನ್ನು ಹುಡುಕಿ, ಸತ್ಸಂಗವನ್ನು ಮಾಡಿ, ಸಾಧನಸಂಪತ್ತನ್ನು ಬೆಳೆಯಿಸಿ ಇದೇ ಜೀವನದಲ್ಲಿ ಸದ್ಗತಿಯನ್ನು ಹೊಂದಬೇಕು ಎನ್ನುವ ಮನೋಭಾವ ಅವರದು. ತಾವು ಕಂಡ ಸತ್ಪಥವನ್ನು ತಮ್ಮಷ್ಟಕ್ಕೆ ತಾವೇ ಇಟ್ಟುಕೊಳ್ಳದೆ ಅದನ್ನು ಬೇರೆಯವರಿಗೂ ತೋರಬೇಕೆಂಬ ಆತುರ ಅವರಲ್ಲಿದೆ.

ಈ ಎಲ್ಲ ಗುಣಗಳೂ ಅವರ ಈ 'ಸುಮನಾಂಜಲಿ' ಎಂಬ ಪುಸ್ತಕವನ್ನು ಕನ್ನಡಿಗರಿಗೆ ಅರ್ಪಿಸುವ ಅವರ ಪ್ರಯತ್ನದಲ್ಲಿ ಅಡಕವಾಗಿವೆ. ಆತ ವಿಕಾಸ, ಆತ್ಮದರ್ಶನ, ಆತ್ಮಸಾಧನ ಇತ್ಯಾದಿಗಳನ್ನು ಕುರಿತು ಕನ್ನಡದಲ್ಲಿ ಇದ್ದ ಸಾಹಿತ್ಯವು ಪರ್ವತರಾಶಿಯಷ್ಟಿದೆ ಎಂದು ಹೇಳಬಹುದು. ಅಥವಾ ಶ್ರೀ. ದೇಶಪಾಂಡೆಯವರು ಉಪಯೋಗಿಸಿದ ಹೆಸರಿಗೆ ಅನುರೂಪವಾದ ಉಪಮೆಯನ್ನೆ ಇಲ್ಲಿ ಕೊಡುವುದಾದರೆ ಆತ್ಮಸಾಹಿತ್ಯದ ಒಂದು ದೊಡ್ಡ ವಿಶಾಲ ವನವೇ ನಮ್ಮೆದುರು ಪುಷ್ಪಭರಿತವಾಗಿ ನಿಂತಿದೆ ಎನ್ನಲು ಅಡ್ಡಿಯಿಲ್ಲ. ತಮ್ಮ ತಮ್ಮ ಅಭಿರುಚಿಯಂತೆ ಜನರು ಈ ವನದಲ್ಲಿ ವಿಹರಿಸಿ ಸುಮನಗಳನ್ನು ಆಯ್ದು ಅಂಜಲಿ ರೂಪದಲ್ಲಿಯೊ ಮಾಲೆಯ ರೂಪದಲ್ಲಿಯೊ ಅವುಗಳನ್ನು ಪರಮಾತ್ಮನಿಗೆ ಅರ್ಪಿಸಬಹುದು. ಆತ್ಮವಿಕಾಸದ ಮೆಟ್ಟಲುಗಳನ್ನರಿತ ಮನೋಹರರಾಯರು ಇಲ್ಲಿ ಆಯಾ ಮೆಟ್ಟಲಿಗೆ ಸಲ್ಲುವ ಸುಮನಗಳನ್ನು ಎತ್ತಿ ಅವುಗಳನ್ನು ವ್ಯವಸ್ಥೆಯಿಂದ ಹಚ್ಚಿ ಮನೋವೇಧಕ ರೀತಿಯಲ್ಲಿ ನಮ್ಮೆದುರು ಮುಂಡಿಸಿರುವರು. ಇವು ಎಲ್ಲ ಸಾಧಕರಿಗೂ ಉಪಯುಕ್ತವಾಗಲೆಂದು ಹಾರೈಸಿ ಈ ಪ್ರಯತ್ನಕ್ಕಾಗಿ ಆಯ್ಕೆಗಾರರನ್ನು ಅಭಿನಂದಿಸಿ ನಾನು ವಿರಮಿಸುವೆ.

ಹೊಸದಿಲ್ಲಿ
೩—೧೦—೫೦

**ರಂಗನಾಥ ದಿವಾಕರ**

# ಪ ರಿ ವಿ ಡಿ

( ಇ ) ವಚನಗಳು ೨೬

೧೧ ಹಲಬಗೆಯ ಹಂಬಲ ಬಿಡು. ೧೨ ಶರಣರ ಕಿಂಕರನಾಗು. ೧೩ ದೇವರನು ಹಿಂಬಾಲಿಸು. ೧೪ ಕೊಟ್ಟು ಕುದಿಯದಿರು. ೧೫ ದೇವನನ್ನಲ್ಲದೆ ಯಾರನ್ನೂ ಬೇಡದಿರು. ೧೬ ಕೊಡುವವನು ಒಯ್ಯುವವನು ಹರನೇ ೧೭ ಸಿರಿಯನೆಚ್ಚಿ ಕೆಡದಿರು. ೧೮ ಮುಪ್ಪು ಸಾವಿನ ಮುನ್ನ ದೇವನನ್ನು ಭಜಿಸು. ೧೯ ನಿಜವ ನಿಶ್ಚಯಿಸು. ೨೦ ತಾನೆತೋರುವ ಅಖಂಡ ಬೆಳಕೇನಿಜ.

## ಗೊಂಚಲು ಮೂರು ೭೧–೯೧

### ನಡೆ – ನುಡಿ

–ಅ– ಪದಗಳು

೧೬ ದಾಳಿಬಾರದ ಮುನ್ನ ಧರ್ಮವ ಕೈಕೊಳ್ಳಿ. ೧೭ ಪರರ ಹೆಣ್ಣು, ಹೊನ್ನು ಮಣ್ಣು, ಬಯಸಬೇಡ. ೧೮ ನಾಳೆಯೆಂಬವನ ಮನೆ ಹಾಳು. ೧೯ ಪ್ರತಿನಿತ ಮನವ ಶೋಧಿಸು. ೨೦ ಉದರ ವೈರಾಗ್ಯ ಬೇಡ. ೨೧ ದಂಭವ ತೊರೆಯಿರಿ. ೨೨ ಮನ ಮೆಚ್ಚಿ ನಡೆಯಿರಿ. ೨೩ ಕೈ, ನಾಲಿಗೆ, ಮನವಕಟ್ಟು. ೨೪ ಬಲ್ಲವರಲಿ ಬಿಲ್ಲಾಗಿ ತನು-ಮನವ ತಿದ್ದು.

[ ಆ ] ಪದ್ಯಗಳು

೧೦ ಜರೆಯ ಮುನ್ನ ಹರಿಯ ಪಡೆ. ೧೧ ಅಧಿಕಾರಿ-ಮುಮುಕ್ಷು. ೧೨ ಇಹ-ಪರಂಗಳ ಚಿಂತೆ. ೧೩ ತನು-ಸುಖವ ತೊರೆದು ಆತ್ಮ-ಸುಖವ ಪಡೆ. ೧೪ ಸದಾಚಾರ-ಸ್ವರೂಪ.

( ಇ ) ವಚನಗಳು

೨೧ ಸತ್ಯ-ಅಸತ್ಯ ವಿಚಾರ. ೨೨ ಅಂತರಂಗ-ಬಹಿರಂಗದ ಶುದ್ಧಿ. ೨೩ ದಯವೇ ಧರ್ಮದ ಮೂಲ. ೨೪ ಪರಧನ-ಪರಸ್ತ್ರೀಯರಿಗಂಜು. ೨೫ ತನ್ನ ಕೋಪ ತನ್ನನ್ನು ಸುಡುವದು. ೨೬ ಸ್ತುತಿ-ನಿಂದೆಗಳನು ಸಹಿಸು. ೨೭ ಡಾಂಭಿಕರಿಗೆ ದೇವನೊಲಿಯ. ೨೮ ಶೀಲ-ನೇಮಗಳು. ೨೯ ವಿಷಯ ವಿಷದಿಂದ ವಿವೇಕ ಹಾನಿ. ೩೦ ಹೆಣ್ಣು, ಹೊನ್ನನ್ನು ಬಯಸದೆ ದೇವರ ದಾಸನಾಗು.

## ಗೊಂಚಲು ನಾಲ್ಕು ೯೩–೧೦೪

### ಸಂತರ – ಸಂಗ

–ಅ– ಪದಗಳು

೨೫ ಸಂತರ ಸಂಗವ ಸಂಪಾದಿಸು. ೨೬ ಕಲ್ಪತರುವಿಗೂ ಮಿಗಿಲಾದುದು. ೨೭ ಸಂತರಿಂದಲೇ ಪರಮಾನಂದ. ೨೮ ಶರಣರ ಸೇವೆಯಲ್ಲಿರಿಸು.

[ ಆ ] ಪದ್ಯಗಳು

೧೫ ಸತ್ಸಂಗದ ವಿಸ್ತಾರ. ೧೬ ಅಮೋಘ ಪರಿಣಾಮ. ೧೭ ಭಕ್ತರ ನೆರೆಯಿಂದ ಮುಕ್ತಿ.

( ಇ ) ವಚನಗಳು

೩೧ ಬಲ್ಲವರ ಸಂಗದಿಂದ ಬೆಣ್ಣೆಯ ಪ್ರಾಪ್ತಿ ೩೨ ಸಂಗದಿಂದ ಸರ್ವಸುಖ. ೩೩ ಆತ್ಮಾತ್ಮಮಂಥನದಿಂದ ಅನುಭಾವ. ೩೪ ತನು-ಮನ ಶುದ್ಧಿ. ೩೫ ಸಜ್ಜನರದು ಪರುಷ-ಸ್ಪರ್ಶ. ೩೬ ಶರಣರ ಸರಸ ಸಮ್ಮೇಲನ. ೩೭ ಶರಣ-ಸೇವೆಯ ರೀತಿ. ೩೮ ಶರಣರ ಮೇಲ್ಮೆ. ೩೯ ಶರಣರ ಬರವು ಹಿಗ್ಗಿನ ಬರವು. ೪೦ ಶರಣರು ಎನ್ನ ಪ್ರಾಣ. ೪೧ ಅವರಿಂದ ಎನ್ನ ಕುಲ ಪಾವನ.

## ಗೊಂಚಲು ಐದು ೧೦೫—೧೨೩

## ಸದ್ಗುರು — ಕರುಣ

—ಅ— ಪದಗಳು

೨೯ ಗುರುವಿನ ವರಕರುಣ. ೩೦ ಗುರುದೇವನು ಭಕ್ತಿಯ ನೋಡದೆಯೆ ಮುಕ್ತಿಯನೀಯುವ. ೩೧ ಸದ್ಗುರುವು ಅನಾಥ ಬಂಧು. ೩೨ ಗುರುಉಪದೇಶವನಾಲಿಸು. ೩೩ ಗುರುಚರಣಕಮಲದಲಿ ಭೃಂಗನಾಗು. ೩೪ ಪರಮಾತ ನನ್ನು ತೋರುವ ಗುರುವಿನ ಉಪಕೃತಿಯನ್ನು ಮರೆಯುವದೆಂತು ?

[ ಆ ] ಪದ್ಯಗಳು

೧೮ ಶ್ರೀ ಸದ್ಗುರು ಸ್ತವನ. ೧೯ ಸನ್ಮತಿದೋರು ! ೨೦ ಅಂತರಂಗದೊಳಿರು ! ೨೧ ಗುರುಗಳ ಗುಣ-ಕರ್ಮಸೇವೆ.

( ಇ ) ವಚನಗಳು

೪೨ ಶ್ರೀಗುರು ಮುಂದಣಪಥವತೋರಿದ. ೪೩ ನರಜನ್ಮ ತೊಡೆದು ಹರಜನ್ಮ ಮಾಡಿದ. ೪೪ ಗುರುವಿನ ಬರವು ಮುಕ್ತಿಯ ಬರವು. ೪೫ ಕ್ಷೇತ್ರವ ಶುದ್ಧ ಮಾಡಿ ಬೀಜವ ಬಿತ್ತುವ. ೪೬ ಹುಟ್ಟು ಸಾವನ್ನು ಅಳಿಸುವ. ೪೭ ಗುರು ತನು ಗುಣಕ್ಕೆ ಕೆಂಡವಿದ್ದಂತೆ. ೪೮ ಗುರುವು ಯಾರಾದರೇನು ? ೪೯ ಎನ್ನೊಳಗೆ ತನ್ನ ತೋರಿದ. ೫೦ ಗುರುವಿನಿಂದ ಜ್ಞಾನೋದಯವಾಗಲು ದಾಸೋಹ ಬೇಕು. ೫೧ ಗುರುಕರುಣ-ದುರ್ಲಭ. ೫೨ ಅರಿವೇ ಗುರು, ಆಚಾರವೇ ಶಿಷ್ಯ.

## ಗೊಂಚಲು ಆರು

೧೨೫–೧೪೬

### ಸಾಧನ—ವಿಚಾರ

—ಅ— ಪದಗಳು

೩೫ ಬೋಧವು ತಿಳಿಯಬೇಕು, ಹೊಳೆಯಬೇಕು, ಉಳಿಯಬೇಕು. ೩೬ ಚಿಂತೆಯ ತೊರೆಯಿರಿ. ೩೭ ಶಾಂತಿಯ ತಪ. ೩೮ ಅನುಭವದ ಅಡಿಗೆ. ೩೯ ಆತ್ಮೋದ್ಧಾರಕ್ಕೆ ಭಗವಂತನ ನಾಮವೊಂದೇ ಸಾಲದೇ ? ೪೦ ಹಗಲಿರುಳು ನಾಮಾಮೃತವ ನೀಡು. ೪೧ ಅಂತರಂಗದಲ್ಲಿ ಬಿಂಬಧ್ಯಾನ. ೪೨ ಒಳಗಣ್ಣಿನಿಂದ ಹರಿಯ ನೋಡು. ೪೩ ಅರಿತವರ ಹರಿಪೂಜೆ.

[ ಆ ] ಪದ್ಯಗಳು

೨೨ ಧ್ಯಾನದ ಬಗೆ. ೨೩ ಚಿನ್ಮಯನ ಧ್ಯಾನವು ಕಲ್ಪತರುವು. ೨೪ ಕಡುಸಂಕಟದಲ್ಲಿಯೂ ಧ್ಯಾನವ ಬಿಡದಿರು. ೨೫. ಸದ್ವೈವ ದೇವನನ್ನು ನೆನೆಯಿರಿ.

( ಇ ) ವಚನಗಳು

೫೩ ಒಲಿದು ಒಲಿಸಿಕೊಳು. ೫೪ ನಿಷ್ಠೆಯ ಪರೀಕ್ಷೆ. ೫೫ ಭಕ್ತಿಯ ಹೊನ್ನಿಗೆ ಸಂಕಟದ ಪುಟ. ೫೬ ಕೊಂದರೂ ಭಕ್ತಿಯ ಬಿಡೆನು. ೫೭ ಛಲದ ಬಲ. ೫೮ ಕಲಿಯುಗದಲ್ಲಿ ನಾಮಸ್ಮರಣೆಯೆ ಮೇಲು ಸಾಧನ. ೫೯ ನಾಮವು ಕಲ್ಪತರು. ೬೦ ನಾಮ ಮಹಿಮೆ. ೬೧ ನಿಮ್ಮ ನೆನವು ಮರವಿನ ಕತ್ತಲೆಗೆ ಜ್ಯೋತಿ. ೬೨ ನಿಮ್ಮ ನೆನಹು ಎನ್ನ ಪ್ರಾಣ. ೬೩ ನಾಮಾಮೃತವ ನೀಡು. ೬೪ ಜ್ಞಾನಲೋಚನದ ನೋಟ. ೬೫ ನೀವು ಎನ್ನಲ್ಲಿ ತುಂಬಿಯಿದ್ದಮೂಲಕ ನಾನು ' ತುಂಬಿ ' ಯಾಗಿರುವೆ. ೬೬ ಅಷ್ಟಸಾತ್ವಿಕ ಭಾವಗಳೇ ಭಕ್ತಿಯ ಕುರುಹು. ೬೭ ನಿಷ್ಕಾಮ ಭಕ್ತಿ, ೬೮ ದೇವರ ಕೃಪೆಯ ಹಿರಿಮೆ.

## ಗೊಂಚಲು ಏಳು

೧೪೭–೧೬೫

### ಕರುಳಿನ ಕಳವಳ

—ಅ— ಪದಗಳು

೪೪ ನನ್ನ ರೋಗವನ್ನು ಕಳೆ. ೪೫ ತನುಮನಗಳು ನಿಮ್ಮನ್ನು ನೆನೆಯಲೀಯವು. ೪೬ ಬಿನ್ನಹಕೆ ಬಾಯಿಲ್ಲವಯ್ಯಾ. ೪೭ ನಂಬಿದವರೊಡನೆ ಇಂತಣಕವೇ ? ೪೮ ಎನ್ನ ಕಾಯಬೇಕಯ್ಯ ! ೪೯ ನಿನ್ನ ಪಾದವೇ ಗತಿ. ೫೦ ಬೇರೆ ಗತಿಯಾರೆನಗೆ ? ೫೧ ಇದೇ ಸಲಹುವ ಸಮಯ. ೫೨ ನನ್ನ ಏಕಮೇವ ಬೇಡಿಕೆ. ೫೩ ಹೃದಯದಿಂದಗಲದಿರು.

[ ಆ ] ಪದ್ಯಗಳು

೨೫ ಮನದ ಮಂಗತನ ಬಿಡಿಸು. ೨೬ ಮನವು ನಾಮವ ಮರೆಯದಂತಿರಿಸು. ೨೭ ನಿನ್ನೆಡೆ ಬರುವಂತೆ ಮಾಡುವದು ಎಂದು ?

( ಇ ) ವಚನಗಳು

೬೯ ಮನವು ವಿಷಯಕ್ಕೆ ಹರಿವುದು. ೭೦ ವಿಷಯರಹಿತನ ಮಾಡು. ೭೧ ಹಸಿವು ನಿದ್ರೆಯ ಬಿಡಿಸು. ೭೨ ನಿನ್ನ ನೆನವ ಚಿಂತೆ. ೭೩ ನಿಮ್ಮನುಳಿದು ಅನ್ಯಕ್ಕೆಳಸದು ಮನ. ೭೪ ನೀವಲ್ಲದೆ ಎನಗಾರಯ್ಯ ? ೭೫ ಸಂತತವಾದ ನೆನವು. ೭೬ ಹಗಲಿರುಳು ನಿಮ್ಮ ಕಳವಳ.

## ಗೊಂಚಲು ಎಂಟು ೧೬೭—೧೭೮

### ಸರ್ವ — ಸಮರ್ಪಣ

—ಅ— ಪದಗಳು

೫೪ ಸೂತ್ರಧಾರಿ ನೀನು. ೫೫ ನಿನ್ನ ಪ್ರೇರಣೆಯಿಂದ ನಡೆವೆ, ನುಡಿವೆ. ೫೬ ನಿನ್ನನ್ನು ತೊರೆದು ಜೀವಿಸಬಹುದೇ ? ೫೭ ಎಲ್ಲವೂ ನಿನ್ನದಯ್ಯ. ೫೮ ಕಾಯದೇವಾಲಯದಿ ಭಾವಪುಷ್ಪದಿಂವ ಪ್ರಾಣಲಿಂಗದ ಪೂಜೆ.

[ ಆ ] ಪದ್ಯಗಳು

೨೮ ಮನ, ಬುದ್ಧಿ, ಕರ್ಮಗಳನ್ನು ಎನಗೆ ಅರ್ಪಿಸು.

( ಇ ) ವಚನಗಳು

೭೭ ತಂದೆ ತಾಯಿ ನೀನು. ೭೮ ನೀವೇ ಪ್ರಾಣ-ಗತಿ-ಮತಿ. ೭೯ ಎನ್ನ ದೇಹ ವೀಣೆಯನ್ನು ಬಾರಿಸು. ೮೦ ಎನ್ನ ಮನಸದೈವ ನಿಮ್ಮಲ್ಲಿ. ೮೧ ನಿಮ್ಮಿಂದ ನಿಮ್ಮನು ನೆನೆವೆ. ೮೨ ನೀವು ಆಡಿಸಿದಂತೆ ಆಡುವೆ. ೮೩ ನಿಮ್ಮ ಕಡಲಲ್ಲಿಯ ಬೊಬ್ಬುಳಿ ನಾನು. ೮೪ ಎನ್ನ ಸರ್ವಸ್ವ ನೀನೆಯಯ್ಯ.

## ಗೊಂಚಲು ಒಂಭತ್ತು ೧೭೯—೨೦೦

### ಅನುಭಾವದ ಅಂದ

—ಅ— ಪದಗಳು

೫೯ ಎಲೆಲ್ಲಿಯೂ ಜ್ಯೋತಿರ್ಲಿಂಗ ದರ್ಶನ. ೬೦ ಚಿದ್ರತ್ನವನ್ನುನೋಡಿರಿ. ೬೧ ದಿವ್ಯ ಪರಬಿಂದು. ೬೨ ತೇಜಃಪುಂಜವಸ್ತು ೬೩ ಅನಾಹತನಾದ ಶ್ರವಣ. ೬೪ ಪರಂಜ್ಯೋತಿಯ ಬೆಳಕು ೬೫ ಸೂರ್ಯನಿಲ್ಲದ ಪ್ರಭೆ, ಚಂದ್ರನಿಲ್ಲದ ಬೆಳದಿಂಗಳು. ೬೬ ಕಣ್ಣಿನಲ್ಲಿಯ ಕೈವಲ್ಯವ ಬಣ್ಣಿಸಬಾರದು.

೬೭ ಅಂತರಂಗದಲ್ಲಿ ಭಗವಂತನನ್ನು ಕಂಡೆ. ೬೮ ವೈಕುಂಠದರ್ಶನ. ೬೯ ಏನೆಂದು ಹೇಳಲಿ ಆನಂದ ಸಂಭ್ರಮ.

[ಆ] ಪದ್ಯಗಳು

೨೯ ಚಿದ್ರೂಪ ದರ್ಶನ. ೩೦ ಆತ್ಮದರ್ಶನದಿಂದ ಪರಮಾನಂದ.

(ಇ) ವಚನಗಳು

೮೫ ಧ್ಯಾನದಲ್ಲಿಯು ಸುಗ್ಗಿ. ೮೬ ಚಿತ್ಸೂರ್ಯನುದಯ. ೮೭ ಅಂಗವಿಲ್ಲದ ರೂಪ ಕಂಡೆ. ೮೮ ಅನಿಲದಲ್ಲಿಯು ತಂಪಿನಂತೆ ಕಳೆಯಲ್ಲಿಯು ರೂಪ. ೮೯ ಅಮೃತ-ವರ್ಷ. ೯೦ ನಿಮ್ಮ ನೋಟ, ಕೂಟದಿಂದ ಪರಮ ಸುಖ. ೯೧ ಸ್ವಾನುಭವದ ಸುಖವ ಹೇಳಬಾರದು. ೯೨ ಅಖಂಡಿತನ ಕಂಡೆನೆಂಬವರುಂಟೇ ? ೯೩ ನಿಮ್ಮನ್ನು ಮುಟ್ಟಿದವರು ನಿಮ್ಮಂತಪ್ಪರು. ೯೪ ಲಿಂಗೈಕ್ಯದ ಸ್ವರೂಪ. ೯೫ ಲಿಂಗ ಪ್ರಾಣಸಂಬಂಧ. ೯೬ ಒಡಲಿಲ್ಲದ ಬಯಲು.

## ಗೊಂಚಲು ಹತ್ತು — ೨೦೧—೨೧೮

## ದಿವ್ಯ — ಜೀವನ

—ಅ— ಪದಗಳು

೭೦ ಇದ್ದು ಜೈಸಬೇಕು. ೭೧ ಸ್ವಹಿತ ಪಡೆದವ ಉಪಾಧಿರಹಿತ. ೭೨ ಎಲ್ಲ ಕರ್ಮ ಹರಿ-ಪ್ರೇರಿತ. ೭೩ ಬೂದಿ ಮುಚ್ಚಿದ ಕೆಂಡದಂತೆ ಇಪ್ಪರು. ೭೪ ಕಲ್ಪ ಭೂರುಹರಾದ ದಾಸರು ನರರೇ ? ೭೫ ತನು ತಂಬೂರಿಯಲ್ಲಿ ಪ್ರಣವನಾದದೊಡನೆ ಹಾಡುವ ದಾಸರು. ೭೬ ಪರಮಾಮೃತವ ಸವಿವ ಪರಮಹಂಸರು. ೭೭ ಬ್ರಹ್ಮಾನಂದ ಭರಿತ ಯೋಗೀಶ್ವರರು.

[ಆ[ ಪದ್ಯಗಳು

೩೧ ಜ್ಞಾನಿಯ ಲಕ್ಷಣ. ೩೨ ಶಿವನಾದ ಚಿದಾನಂದ.

(ಇ) ವಚನಗಳು

೯೭ ಹಿರಿದು ಕಿರಿದೆಂಬ ಬೇನವ ಮರೆದವ ಶರಣ. ೯೮ ಘನದಲ್ಲಿ ಬೆರೆವುದೇ ಹಿರಿತನ. ೯೯ ತುಂಬಿದುದು ತುಳುಕದು. ೧೦೦ ಕತ್ತಲೆ ಕೊರತೆಗಳ ಅಭಾವ. ೧೦೧ ತಾವರೆ ಮುತ್ತುಗಳಂತೆ ಅಲಿಪ್ತ. ೧೦೨ ಮಲ ರಹಿತ. ೧೦೩ ಮಹಾಭಕ್ತನ ಹೃದಯದಲ್ಲಿ ಶಿವ. ೧೦೪ ಶರಣನ ವಚನ ಪರಮಾಮೃತ. ೧೦೫ ಮಾಡಿ ಮಾಡದವ. ೧೦೬ ಆನಂದದ ಅತಿರೇಕ.

ಅನುಬಂಧ ೨೧೯

ಪ್ರಿಯ ವಾಚಕರೇ,

# ನಿಮಗೆ ಎಂಥ ಗ್ರಂಥಗಳುಬೇಕು ?

ಬಳ್ಳಿಯು ರಾಷ್ಟ್ರನಿರ್ಮಾಣದ ದೃಷ್ಟಿಯಿಂದ ವಿಚಾರಪರ ಗ್ರಂಥಗಳನ್ನು ಪ್ರಕಟಿಸುತ್ತ ಬಂದಿದೆ. ಇಲ್ಲಿಗೆ ೧೨ ವರ್ಷಗಳು ಮುಗಿದವು. ಮುಂದಿನ ಮಾರ್ಗಕ್ರಮಣದಲ್ಲಿ ನಿಮ್ಮ ಸಲಹೆ–ಸೂಚನೆಗಳು ಆವಶ್ಯಕ. ರಾಷ್ಟ್ರ ನಿರ್ಮಾಣದ ದೃಷ್ಟಿಯಿಂದ ಕನ್ನಡ ನಾಡಿನ ಇಂದಿನ ಸ್ಥಿತಿಯಲ್ಲಿ ಯಾವ ಬಗೆಯ ಗ್ರಂಥಗಳು ಬೇಕೆಂದು ನಿಮಗನಿಸುತ್ತದೆ ? ದಯವಿಟ್ಟು ಆ ಬಗೆಗೆ ಸೂಚನೆಗಳನ್ನು ಮಾಡಬೇಕಾಗಿ ಬಿನ್ನಯಿಸುತ್ತೇನೆ.

ಮಿಂಚಿನಬಳ್ಳಿಯ ವಾಚಕರೂ ಸಹಾಯಕರೂ ಪೋಷಕರೂ ಸಹಾನು ಭೂತಿಯುಳ್ಳವರೂ ಸಲಹೆಗಳನ್ನಿತ್ತು ಬಳ್ಳಿಯ ಮುನ್ನಡೆಗೆ ಸಹಾಯವನ್ನು ನೀಡುವಿರೆಂದು ನಂಬಿರುವೆ.

ತಮ್ಮ ಬಂಧು

**ಬುರ್ಲಿ ಬಿಂದುಮಾಧವ.**

# ಪ್ರಸ್ತಾವನೆ

## (೧)

ನಮ್ಮ ಭಾರತಮಾತೆಯೂ—ಆಕೆಯ ಭಾರತಕುಲವೂ ಚಿರಂತನವಾಗಿ ಬಾಳಲು ಬೇಕು, ಬೆಳೆಯಲು ಬೇಕು, ಹೊಳೆಯಲು ಬೇಕು. ಅದಾಗಲು ಭಾರತಾಂಬೆಯ ಹಿರಿಮಗಳಾದ ಕನ್ನಡಮ್ಮನೂ—ಅವಳ ಹಿರಿದಾದ ಕನ್ನಡ ಕುಲವೂ ಬಾಳಲು ಬೇಕು, ಬೆಳೆಯಲು ಬೇಕು, ಹೊಳೆಯಲು ಬೇಕು. ಇದಾಗುವದೆಂತು? ಇದರ ಹಿರಿದಾದ ಸಾಧನವು ಯಾವದು? ನಮ್ಮ ಮುನ್ನೋಟದ ಹಿರಿಯರು ಇದನ್ನು ಪಡೆಯಲು ಅದಾವ ಸಾಧನವನ್ನು ಬಳಸಿದರು? ಅದರಿಂದ ಅವರು ಪಡೆದ ಫಲವೇನು? ಭಾರತವು ಒಂದಾಗಬೇಕು, ಮುಂದಾಗಬೇಕು; ಕನ್ನಾಡು ಒಂದಾಗಬೇಕು—ಮುಂದಾಗಬೇಕು. ಇದೇ ಅವರು ಕಂಡ ಕನಸು. ಅದನ್ನು ನನಸಾಗಿಸಲು ಅವರು ಹೆಣಗಿದರು. ಆ ಯತ್ನದಲ್ಲಿ ಅವರಿಗೆ ದೊರೆತ ಗೆಲವಿನ ಫಲವಾಗಿಯೆ ನಾವು ಈವರೆಗೆ ಬಾಳಿದುದು. ಇನ್ನು ಮುಂದಾದರೂ ಅದನ್ನು ಪಡೆದೇ ನಾವು ಬಾಳಲು—ಬೆಳೆಯಲು—ಹೊಳೆಯಲು ಹವಣಿಸಬೇಕು. ಅದಾಗದೆ ನಮಗೆ ಬಾಳಿಲ್ಲ, ಬೆಳೆಯಿಲ್ಲ. ಹೊಳಪಿನ ಮಾತಂತೂ ಹಾಗಿರಲಿ!

ಕುಲವು ಒಂದಾಗುವದೆಂದರೇನು? ನಿಜವಾದ ಒಂದಿಕೆಯು ಹೊಂದಿಕೆಯಲ್ಲಿದೆ. ಅದು ಅನೇಕತೆಯಳಿದ ಏಕತೆಯಲ್ಲ—ಅನೇಕತೆಯುಳಿದ ಏಕತೆ. ಅದು ರೂಪೈಕ್ಯವಲ್ಲ—ರೂಪಮೇಲ, ಸ್ವರೈಕ್ಯವಲ್ಲ–ಸ್ವರಮೇಲ, ರಸೈಕ್ಯವಲ್ಲ–ರಸಮೇಲ. ಅದು ದೇಹಭಿನ್ನತೆಯಲ್ಲಿಯ ಭಾವೈಕ್ಯ, ಭಾವಭಿನ್ನತೆಯಲ್ಲಿಯ ಆತ್ಮೈಕ್ಯ. 'ಅವಿಭಕ್ತಂ ವಿಭಕ್ತೇಷು'—ಭಿನ್ನತೆಯಲ್ಲಿ ಅಭಿನ್ನತೆ—ಎಂದು ಶ್ರೀ ಗೀತಾಮಾತೆಯ ಅಭಿಮತ. ಐಕ್ಯವೆಂದರೆ—ಸಾಮ್ಯವೆಂದರೆ, ದೇಹೈಕ್ಯವಲ್ಲ—ಆತ್ಮೈಕ್ಯ, ದೇಹಸಾಮ್ಯವಲ್ಲ ಆತ್ಮಸಾಮ್ಯ, ಎಂಬುದು ಮಹಾತ್ಮಾಜಿ ಅವರ ಅಭಿಪ್ರಾಯ.

ನಿಜವಾಗಿ ವಿವಿಧತೆಯೆ ವಿಶ್ವವ್ಯಾಪಾರದ ಮೂಲ. ಅದರಿಂದಲೇ ವಿಶ್ವದ ವೈಭವ. ಅದಕ್ಕಾಗಿಯೆ ಏಕನು ಅನೇಕನಾದುದು. ಆದರೆ ಈ ಅನೇಕದಲ್ಲಿಯ

ಏಕತ್ವದ ಅರಿವು ಅಳಿದೊಡನೆ ಅನೇಕದ ಐಶ್ವರ್ಯವು ಕಣ್ಮರೆಯಾಗಿ, ಅನೈಕ್ಯದ ಅನರ್ಥವು ನಮ್ಮನ್ನು ಕಂಗೆಡಿಸಿತು. ಕಂಗೆಟ್ಟ ನಾವು ಜಗತ್ತಿನ ಜೀವಾಳವಾದ ಅನೇಕತೆಯನ್ನೆಯೆ–ಅಸಮತೆಯನ್ನೆಯೆ–ವ್ಯಕ್ತಿ ವಿಶೇಷವನ್ನೆಯೆ–ಕುಲವಿಶೇಷ ವನ್ನೆಯೆ, ಹಾಳುಗೊಳಿಸಲು ಮುಂದಾಗಿರುವೆವು. ಇದು ಆತ್ಮನಾಶದ–ಸರ್ವ ನಾಶದ ಕುರುಹೇ ಸರಿ!

ಕುಲವು ಮುಂದಾಗುವದೆಂದರೇನು? ಅದರಲ್ಲಿ ಎರಡು ಬಗೆಗಳು. ಒಂದು ಭಾವಾತ್ಮಕ–ವಿಧಾಯಕ, ಇನ್ನೊಂದು ಅಭಾವಾತ್ಮಕ–ವಿಘಾತಕ. ತನ್ನಲ್ಲಿಯ ಗುಣಶಕ್ತಿಗಳನ್ನು ಬೆಳೆಯಿಸಿ ಮುಂದಾಗುವದು ಭಾವಾತ್ಮಕ ರೀತಿ; ಅನ್ಯರ ಗುಣಶಕ್ತಿಗಳನ್ನು ಅಳಿಸಿ ಮುಂದಾಗಬೆಳೆಸುವದು ಅಭಾವಾತ್ಮಕ ಪದ್ಧತಿ ನಮ್ಮವರು ಸದೈವ ಭಾವಾತ್ಮಕ–ವಿಧಾಯಕ ಬಗೆಯನ್ನೆಯೆ ಅನುಸರಿಸಿದರು, ಅಭಾವಾತ್ಮಕ–ವಿಘಾತಕವಾದುದನ್ನಲ್ಲ. ಆದುದರಿಂದ ನಮ್ಮ ಏಳ್ಗೆಯು ಅನ್ಯರ ಬೀಳ್ಗೆಯನ್ನೆಂದೂ ಬಯಸಲಿಲ್ಲ. ಅವರ ಅಳಿವನ್ನಾಶ್ರಯಿಸಿ, ಆ ಅಳಿವಿನ ರಾಶಿಯನ್ನೇರಿ ಮೆರೆಯಲು ಅದು ಎಂದೂ ಯತ್ನಿಸಲಿಲ್ಲ. ಅದಕ್ಕಾಗಿ ನಮ್ಮ ನಾಡು–ಸಂಸ್ಕೃತಿಗಳು ಸಾವಿರ ಆಘಾತಗಳನ್ನು ಸಹಿಸುವ ಬಲವನ್ನು ಪಡೆದವು, ಅನಂತ ಅನಾಹುತಗಳ ನೆರೆಯೊಳಗಿಂದಲೂ ಸುರಕ್ಷಿತವಾರಾಗಿ ಮರಳಿ ತಲೆಯನ್ನೆತ್ತಿ ನಿಲ್ಲಲು ಸಮರ್ಥವಾದವು.

ಇನ್ನು ನಮ್ಮ ಸನಾತನ ಕುಲದ ಸರಿಯಾದ ಐಕ್ಯವನ್ನೂ ಏಳ್ಗೆಯನ್ನೂ ಸಾಧಿಸುವದೆಂತು? ಇಲ್ಲಿಯೂ ನಮ್ಮ ಹಿಂದಿನ ಹಿರಿಯರು ನೀಡಿದ ಬೆಳಕೆಯೆ ನಮಗೆ ಯೋಗ್ಯವಾದ ದಾರಿಯನ್ನು ತೋರಿಸಬಲ್ಲದು. ಮಾತ್ರ ನಾವದನ್ನು ಪ್ರೀತಿಯಿಂದಲೂ, ಆದರದಿಂದಲೂ, ವಿನಯದಿಂದಲೂ ಕಾಣಲು ಯತ್ನಿಸ ಬೇಕು, ಬಳಸಲು ಹೆಣಗಬೇಕು. ಪೂರ್ವಗ್ರಹಗಳು ನಮ್ಮ ದೃಷ್ಟಿಯನ್ನು ಮಸುಳಿಸಕೂಡವು. ಇಂಥ ವಿಮಲ ದೃಷ್ಟಿಯಿಂದ ನೋಡಿದರೆ ನಮಗೆ ಅದೇನು ಕಾಣುವದು? ನಮ್ಮವರು ಈವರೆಗೆ ಅವೆರಡನ್ನು ಧರ್ಮದ ನೆರವಿನಿಂದಲೇ ಸಾಧಿಸಲೆತ್ನಿಸಿದರೆಂಬುದೇ ಅಲ್ಲವೆ?§ ನಮ್ಮ ಐಕ್ಯದ ತಳಹದಿ

§ The powerful men in every country are moving society whatever way they like and the rest are only a flock of sheep Now... who are those men of power in India?— They who

ಧರ್ಮ, ಏಳ್ಗೆಯ ಮೂಲ ಧರ್ಮ! ಅಲ್ಲವೆ? ಶ್ರೀಕೃಷ್ಣನಿಂದ ಮೊದಲು ಮಾಡಿ, ವಂದನೀಯ ಮಹಾತ್ಮಾಜಿಯವರ ವರೆಗೆ, ನಮ್ಮ ನಾಡಿನಲ್ಲಿ ಆಗಾಗ ಜನಿಸಿದ ಮಹಾನುಭಾವರೆಲ್ಲರು ಧರ್ಮದ ನೆರವಿನಿಂದಲೆ—ವಿಶಾಲವಾದ ಧರ್ಮದ ಭೂಮಿಕೆಯ ಮೇಲೆಯೆ, ನಮ್ಮ ನಾಡಿನ ಐಕ್ಯ ಐಶ್ವರ್ಯಗಳನ್ನು ನಿಲ್ಲಿಸಲೆಳಸಲಿಲ್ಲವೇ? ನಾವು ಇಂದಾದರೂ ಅದನ್ನೆಯೆ ಮಾಡಬೇಕಲ್ಲವೇ?

‘ಏನಯ್ಯ! ಇಂದು ನಮ್ಮದು ಧರ್ಮಾತೀತ ರಾಜ್ಯ! ಅದಕ್ಕೆ ನಾವು ಧರ್ಮಾತೀತ ವೃತ್ತಿಯನ್ನು ಬೆಳೆಯಿಸಬೇಕಲ್ಲದೆ ಮರಳಿ ಧರ್ಮದ ಹಾಳು ಜಾಳಿಗೆಯನ್ನು ಹೆಣೆಯುವದೇತಕ್ಕೆ? ಧರ್ಮದ ಅಫೀಮವೇ ನಮ್ಮನ್ನು ಮರುಳುಗೊಳಿಸಿತು, ಹೋಳುಗೊಳಿಸಿತು, ಹಾಳುಗೊಳಿಸಿತು. ಅದನ್ನೆಯೆ ಮರಳಿ ಮೆಲ್ಲುವದುಂಟೆ!’ ಎಂದು ಕೆಲವರು ಕೇಳಬಹುದು ಅವರಿಗೆ ಧರ್ಮದ—ಹಾಗೂ ಧರ್ಮಾತೀತ ರಾಜ್ಯದ ಯಥಾರ್ಥವಾದ ಪರಿಜ್ಞಾನವಿಲ್ಲವೆಂದೇ ನಾವು ವಿನಯಪೂರ್ವಕವಾಗಿ ಹೇಳಬಯಸುವೆವು. ಧರ್ಮವು ಅಫೀಮವಲ್ಲ—ಅಮೃತ. ನಾವು ಹಾಳಾದುದು ಧರ್ಮದ ಅಮೃತ—ಆತ್ಮನನ್ನು ಮರೆತ ಮೂಲಕ. ಅದರ ಬರೀ ದೇಹವನ್ನೆಯೆ ಅರಿತ ಮೂಲಕ—ಅಪ್ಪಿದಮೂಲಕ. ಧರ್ಮ-ದೇಹದ ಆತ್ಯಂತಿಕ ಒಲವು ಹಮ್ಮನ್ನು ಹೆಚ್ಚಿಸಿತು, ಭಿನ್ನತೆಯನ್ನು ಬೆಳೆಯಿಸಿತು, ಮೇಲ್ಮೆಕೀಳ್ಮೆಗಳ ಕಿಚ್ಚನ್ನು ಹೊತ್ತಿಸಿ, ನಾಡನ್ನೂ ನಾಡವರನ್ನೂ ಕಲಹದ ಕುಲುಮೆಯಲ್ಲಿ ಬೇಯಿಸಿತು. ಆದರೆ ಅದರ ಆತ್ಮದ ನಿಚ್ಚಳವಾದ ದರ್ಶನವಾದಾಗಲೆಲ್ಲ, ಅದರ ಸತ್ವದ ಪ್ರಭಾವದಿಂದ ನಾಡಿನಲ್ಲೆಲ್ಲ ಚೈತನ್ಯ ವೈಭವಗಳ ಉಕ್ಕೇ ಬಂದಿರುವದು. ಇನ್ನು ಮೇಲಾದರೂ ಆ ದಿವ್ಯ ದರ್ಶನವೇ—ಅದನ್ನು ಕಂಡ ಮಹಾಪುರುಷರೇ—ನಮ್ಮನ್ನು ಏಳ್ಗೆಯ ಭವ್ಯ ಶಿಖರದ ಮೇಲೆ ಕುಳ್ಳಿರಿಸ ಬಲ್ಲರು.

---

are gaints in religion It is they who lead our society, and it is they again who change our Social laws and usages when necessity demands; and we listen to them silently and do what they command.

—Swami Vivekanand
Pr. Bharat Nov. 1949

ನಮ್ಮ ಧರ್ಮಾತೀತ ರಾಜ್ಯದ ಪುರಸ್ಕರ್ತರ ಅಭಿಪ್ರಾಯವನ್ನೂ ನಾವು ಸರಿಯಾಗಿ ಅರಿತುಕೊಳ್ಳಬೇಕು. ಅನೈಕ್ಯವನ್ನು ಬೆಳೆಯಿಸುವ ಸಂಕುಚಿತ ಧರ್ಮಕಲ್ಪನೆಗಳಿಗೆ ರಾಜ್ಯದ ಆಡಳಿತದಲ್ಲಿ ಸ್ಥಾನವಿರಕೂಡದು, ಆಡಳಿತವು ಎಲ್ಲರ ಕಲ್ಯಾಣಕ್ಕಾಗಿ ಇದೆ—ಇರಬೇಕು, ಅದರಲ್ಲಿ ಪಕ್ಷಪಾತವಿರಬಾರದು–ಇದೆ ಅವರ ಅಭಿಪ್ರಾಯ. ಅವರಿಗೆ ಧರ್ಮವೇ ಬೇಡವೆಂದಲ್ಲ, ನೀತಿಯೆ ಬೇಡವೆಂದಲ್ಲ, ದೇವರೇ ಬೇಡವೆಂದಲ್ಲ. ಅವರ ಅಭಿಪ್ರಾಯಕ್ಕೆ ಅಪಾರ್ಥವನ್ನು ಕಲ್ಪಿಸುವದು ಸರಿಯಲ್ಲ. ಅವರ ಸರಿಯಾದ ಅರ್ಥವನ್ನು ಅರಿತು, ನಾವು ಐಕ್ಯವರ್ಧಕ, ಚೈತನ್ಯವರ್ಧಕ, ಧರ್ಮದ ತಿರುಳನ್ನು ಪ್ರಚುರಗೊಳಿಸಿ, ಜನತೆಯಲ್ಲಿ ಅದನ್ನು ಬೆರೆಯಿಸಿ ಜನಸಾಮಾನ್ಯರ ಭಾವಸಂಸ್ಕೃತಿಯನ್ನು ಉನ್ನತಗೊಳಿಸುವ ಕಾರ್ಯದಲ್ಲಿ ಯಶಸ್ಸನ್ನು ಪಡೆದರೆ ಅದು ಅವರಿಗೆ ಪ್ರಿಯವಾಗದಿರದು. ಆದುದರಿಂದ ಆ ದೃಷ್ಟಿಯಿಂದ ನಾವು ನಿಜಧರ್ಮವನ್ನು ಉಪೇಕ್ಷಿಸುವ ಕಾರಣವಿಲ್ಲ. ಅದರ ಪ್ರಸಾರಕ್ಕೆ ನಾಡಿನ ಹಿರಿಯರಿಂದ ಪ್ರೋತ್ಸಾಹವೇ ದೊರೆಯಬಹುದು— ವಿರೋಧವಲ್ಲ.

(೨)

ಭಾರತವು ಪುಣ್ಯಭೂಮಿ, ಸತ್ಪುರುಷರ ಜನ್ಮಭೂಮಿ— ಕರ್ಮಭೂಮಿ. ಅದೇ ಮೇರೆಗೆ ನಮ್ಮ 'ಹಿರಿದಾದ' ಕನ್ನಡನಾಡೂ ಕೂಡ ಮಹಾನ ಅನುಭಾವಿಗಳ ನೆಲೆವೀಡು. ಶೈವ–ಜೈನ, ವೀರಶೈವ–ವೀರವೈಷ್ಣವ ಸಂಪ್ರದಾಯಕ್ಕೆ ಸೇರಿದ ಪುಣ್ಯಾತ್ಮರ ಪರಂಪರೆಯು ಅಖಂಡವಾಗಿ ನಮ್ಮ ಕನ್ನಡಕುಲವನ್ನು ಉನ್ನತಗೊಳಿಸಿದೆ. ಅವರ ಜೀವನವನ್ನು ಪಾವನಗೊಳಿಸಿದೆ. ಅವರೆಲ್ಲ ಭಗವಂತನ ಬೆಳಕನ್ನು ಕಂಡು, ಆತನ ಸುಧೆಯನ್ನು ಕುಡಿದು, ತಮ್ಮ ಸುಮನಗಳನ್ನು ಅರಳಿಸಿದರು. ಅರಳಿದ ಸುಮನಗಳ ಸೌರಭವನ್ನು ಪದ–ಪದ್ಯ–ವಚನಗಳಲ್ಲಿ ಬೀರಿದರು. ಆ ಹೂಗಳನ್ನು ನಾಡವರಿಗೆ ಸಲ್ಲಿಸಿ, ಅವರ ಜೀವನಕ್ಕೆ ಹೊಸ ಕಂಪನ್ನು ದಯಪಾಲಿಸಿದರು. ಅದರಿಂದಲೇ ನಮ್ಮ ಕನ್ನಡನಾಡು ಸಾವಿರ ವರುಷ ಸುಸಂಸ್ಕೃತ ಜೀವನವನ್ನು ಬಾಳಿತು, ವೈಭವಸಂಪನ್ನ ಸಾಮ್ರಾಜ್ಯಗಳನ್ನು ಆಳಿತು. ಅಂದು ನಮ್ಮ ನಾಡನ್ನು ಬೆಳಗಿದ, ನಾಡವರ ಭಾವಜೀವನಕ್ಕೆ ಒಳ್ಳೆಯ ಸಂಸ್ಕಾರ ಸೌರಭವನ್ನು ನೀಡಿದ, ಆ ಭಾವಪುಷ್ಪಗಳು ಇಂದು

ಅದನ್ನೆಯೆ ಮಾಡಲಿಕ್ಕಿಲ್ಲವೆ? ಎಂಬ ನಂಬಿಕೆಯೆ ನಮ್ಮ ಈ '**ಸುಮನಾಂಜಲಿ**'ಯ ಜನನಿ.

ನಮ್ಮ ಭಾರತಕುಲದ ದೃಷ್ಟಿಯು ವಿಶಾಲವಾದುದೂ ಉದಾತ್ತವಾದುದೂ ಇದ್ದಂತೆ ಕನ್ನಡಕುಲದ ದೃಷ್ಟಿಯೂ ತುಂಬ ವಿಶಾಲವಾದುದೂ ಉದಾತ್ತವಾದುದೂ ಇರುವುದು. ಅದರಲ್ಲಿ ಸಂಕುಚಿತತನಕ್ಕೆ ಎಡೆಯಿಲ್ಲ. ಅದರದು ಸಮನ್ವಯ ದೃಷ್ಟಿ. ವಿಶಾಲ ಸಹಿಷ್ಣುತೆಯು ಅದರ ವಿಶೇಷ. ಅದು ಅನುಸರಿಸುವದು ಭಾರತಕುಲದ ಈ ಸನಾತನ ಮಾನವಧರ್ಮವನ್ನು:

ಏಕೋದೇವಃ ಸರ್ವಭೂತಾಂತರಾತ್ಮಾ
ಏಕಾ ಭಕ್ತಿಸ್ತದ್ಗತಂ ಧ್ಯಾನಕರ್ಮ ।
ಜೀವನ್ಮುಕ್ತಿರ್ಮುಕ್ತಿರೇಕಾ ವರಾ ಸಾ
ನಿತ್ಯಾನಂದೋ ಜೀವನಸ್ಯೈಕ ಹೇತುಃ ॥

'ಎಲ್ಲ ಭೂತಗಳಲ್ಲಿ ನೆಲೆಸಿರುವ ಅಂತರಾತ್ಮನೆ ದೇವರು. ಅವನನ್ನು ಪಡೆಯಲು ಮಾಡಬೇಕಾದ ಧ್ಯಾನಕರ್ಮಗಳೇ ಭಕ್ತಿಯು; ಜೀವನ್ಮುಕ್ತಿಯೇ ಹಿರಿದಾದ ಮುಕ್ತಿಯು. ನಿತ್ಯಾನಂದವೇ ಜೀವನದ ಏಕಮೇವ ಗುರಿಯು' ಭಾರತಕುಲದ ಈ ಸನಾತನ ಧರ್ಮವೇ ಕನ್ನಡಕುಲದ ಅಂತಿಮ. ಅದನ್ನೆಯೆ ಕನ್ನಡ ಹಿರಿಯರು ಆಚರಿಸಿದರು. ಆಚರಿಸ ಕಲಿಸಿದರು. ಅದರ ಮೂಲಕವೇ ಕನ್ನಡಕುಲವು ಬಹುಕಾಲ ಕಾಂತಿಯನ್ನೂ ಶಾಂತಿಯನ್ನೂ ಪಡೆಯಿತು-ನೀಡಿತು.

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ? ಮತ್ತೆ
ಒಬ್ಬ ಸರ್ವಜ್ಞಕರ್ತನು ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ ॥ ೧ ॥
ಆ ದೇವ ಈ ದೇವ, ಮಾದೇವನೆನಬೇಡ
ಆ ದೇವರ ದೇವ ಭೂವನ ಪ್ರಾಣಿಗಳಿಗೆ-
ಗಾದವನೆ ದೇವ, ಸರ್ವಜ್ಞ ॥ ೨ ॥

ಸರ್ವಜ್ಞನ ಈ ನುಡಿಯು ನಮ್ಮ ಕನ್ನಡ-ಕುಲದ ವಿಶಾಲದರ್ಶನದ ಹಿರಿಕುರುಹು. ಇದೇ ನಮ್ಮ ಎಲ್ಲ ಹಿರಿಯ ಸತ್ಪುರುಷರ ಅನುಭವದ ಅಮರ ತತ್ವವನ್ನು ಒಳಗೊಂಡಿರುವದು. ಆದುದರಿಂದಲೇ ಅವರಲ್ಲಿ ಭೇದಬುದ್ಧಿಯು

ಬೆಳೆಯಲಿಲ್ಲ, ಅಭೇದಭಾವವೇ ಬೆಳೆಯಿತು, ಸಮನ್ವಯ ವಿವೇಕವೇ ಮೈದಾಳಿತು. ನಿಜವಾಗಿ ಭೇದವಿರುವದು ದೇಹಭಾವದಲ್ಲಿ, ಆತ್ಮಭಾವದಲ್ಲಲ್ಲ, ದೇವಭಾವದಲ್ಲಲ್ಲ. ಶ್ರೀ ತುಕಾರಾಮರವರು ಉಸುರಿದ ಮೇರೆಗೆ – 'ದೇಹವೇ ಪರದೈವ, ಭೋಜನವೆ ವರಭಕ್ತಿ, ಮರಣವೇ ಹಿರಿಮುಕ್ತಿ' ಎಂದು ನಂಬುವ ನಾಸ್ತಿಕ ದೇಹ—ದಾಸರು ವಿಭಕ್ತಿಪ್ರಿಯರು, ಭಕ್ತಿಪ್ರಿಯರಲ್ಲ – ಮುಕ್ತಿಪ್ರಿಯರಲ್ಲ; ಭೋಗಪ್ರಿಯರು, ತ್ಯಾಗಪ್ರಿಯರಲ್ಲ – ಯೋಗಪ್ರಿಯರಲ್ಲ. ಅವರ ಕಣ್ಣಿಗೆ ಸದೈವ ಕಾಣುವದು ಭೇದ, ಅಭೇದವಲ್ಲ; ಅವರು ಸದೈವ ನೆಮ್ಮುವದು ಭೇದವನ್ನು, ಅಭೇದವನ್ನಲ್ಲ; ಸ್ವಾರ್ಥವನ್ನು ಆಶ್ರಯಿಸಿದ ಸ್ವಾರ್ಥವನ್ನೆಯೆ ಪಟ್ಟಗಟ್ಟಿದ ಅವರ ಭೌತಿಕಸುಖವಾದವು ಜನತೆಯಲ್ಲಿ ಐಕ್ಯ ಸೌಹಾರ್ದಗಳನ್ನು ಜನಿಸಲರಿಯದು. ಅದು ಪರಾರ್ಥ–ಪರಮಾರ್ಥಗಳನ್ನು ನೆಮ್ಮಿದ ಆಧ್ಯಾತ್ಮವಾದದಿಂದಲೇ ಸಾಧ್ಯ. ಭೌತಿಕ ಪ್ರಪಂಚವು ಸಾಂತವಾದುದರಿಂದ ಅದರಲ್ಲಿಯ ವಸ್ತುಗಳಿಂದ ದೊರೆವ ಸುಖವೂ ಸಾಂತವಾದುದು. ಆದು ಕೆಲವರ ಸೊತ್ತೇ ಆಗಬಲ್ಲದು, ಹಲವರದು, ಎಲ್ಲರದು ಆಗಲರಿಯದು. ಅದಕ್ಕಾಗಿ ನಾವು ಅನಂತನೆಡೆಗೆಯೆ ಸಾರಬೇಕು. ಆತ್ಮನು ಅನಂತನು. ಆತನು ದಯವಾಲಿಸುವ ಆನಂದವು ಅನಂತವಾದುದು! ಬೇಕಾದವರು ಅದನ್ನು ಬೇಕಾದಷ್ಟು ಸವಿದರೂ ಅನಂತವಾದ ಆನಂದವು ಅನಂತವಾಗಿಯೆ ಉಳಿಯುವದು. ಆದುದರಿಂದ ಅಲ್ಲಿ ಸ್ಪರ್ಧೆಗೆ ಎಡೆಯಿಲ್ಲ. ಕಲಹಕ್ಕೆಯೂ, ಅದರಿಂದುಂಟಾದ ಅಶಾಂತಿಗೂ ಅವಸರಲಿಲ್ಲ.

ಇಂಥ ಆತ್ಮವಿದರ 'ಸುಮನಗಳಿಂದ' ಹೊರಹೊಮ್ಮಿದ ಕುಸುಮಗಳು ನಮ್ಮ ಕವಿವರರು ಬಣ್ಣಿಸಿದಂತೆ ನಿಜವಾಗಿ ಅಂದವಾದವುಗಳು.

ಒಂದರೊಲು ಒಂದಿಲ್ಲ. ಒಂದರೊಳು ಕುಂದಿಲ್ಲ.
ಒಂದೊಂದು ಅಂದವು ತನತನಗೆ ಚಂದ.
ಚಂದಕ್ಕೆ ಒಂದೆ ಮೈ ಸಾಲದೆಂಬಂತೆ ನೂ-
ರೊಂದು ಮೈದಾಳಿ ಕುಣಿಯುವವು ಸ್ವಚ್ಛಂದ ॥

ಅಂಥ ಅಂದವಾದ ಹೂಗಳಲ್ಲಿಯ ಕೆಲವು ನಮ್ಮ 'ಅಂಜಲಿ' ಯಲ್ಲಿ ಬಂದಿವೆ. ಅವುಗಳ ಮೈಗಳು ನೂರೊಂದಾದರೂ, ಆತ್ಮವು (ಚಂದವು) ಒಂದೆ ಎಂಬುದು ಜಾಣ ಓದುಗರಿಗೆ ಕಾಣದಿರದು.

(೩)

ನಮ್ಮ ಭಕ್ತವರರು ಮಾಡಿದ ಭಗವಂತನ ಬಣ್ಣನೆಯನ್ನು ನೋಡಿ! ಎಲ್ಲರಿಗೆ ಆತನು ಪರಿಪೂರ್ಣನು, ವಿಶ್ವಭರಿತನು, ವಿಶ್ವಾತೀತನು. ಎಲ್ಲರೊಳು ಆತನು, ಆತನಲ್ಲಿ ಎಲ್ಲವು. ತಿಲದ ಮರೆಯ ತೈಲದಂತೆ, ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯ ಮಿಂಚಿನಂತೆ, ಕಂಗಳ ಮರೆಯ ಬೆಳಗಿನಂತೆ ಆತನ ನಿಲವು. ಆತನು ಸದ್ರೂಪನು, ಚಿದ್ರೂಪನು, ಆನಂದರೂಪನು. ಆತನು ತನ್ನ ವಿನೋದಕ್ಕಾಗಿ ವಿಶ್ವವನ್ನು ನಿರ್ಮಿಸುವ, ಆಟ ಮುಗಿಸೊಡನೆ ಅದನ್ನು ಮರಳಿ ತನ್ನಲ್ಲಿ ಮುಳುಗಿಸುವ. ದಧಿಮಥನದಿಂದ ನವನೀತವೂ, ಸುಧೆ ಕೋಲಿನ ಮಥನದಿಂದ ಸಕ್ಕರೆಯೂ, ಚಂದನದ ಮಥನದಿಂದ ಶ್ರೀಗಂಧವೂ ತೋರುವಂತೆ, ಶರಣರ ಹೃದಯಮಥನದಿಂದ, ಅಲ್ಲಿ ಅವನು ತಾನೆತಾನಾಗಿ ಮೈದಾಳಿ, ಅವರಿಗೆ ತನ್ನ ಸವಿಯನ್ನು ಕೊಡುವ. ಕರಿಯು ಕನ್ನಡಿಯಲ್ಲಿ ಅಡಗಿರ್ದಂತೆ, ಆತನು ಸುಜನರ ಹೃದಯದಲ್ಲಿ ಅಡಗಿರುವ. ಭಗವಂತನು ನಿರ್ಮಲನು, ನಿಃಕಲನು, ನಿರ್ಲಿಪ್ತನು, ನಿರ್ಭಯನು, ನಿರಂಜನನು. ಆತನು ಸರ್ವಜ್ಞನು, ಸರ್ವಸಮರ್ಥನು,ಸಾಕಾರನು, ನಿರಾಕಾರನು;ಕರುಣಮಯನು, ದುರಿತದೂರನು, ಶರಣಜನ ಮನೋವಲ್ಲಭನು, ಭಕ್ತರಕ್ಷಕನು, ಅನಾದಿಯು– ಅನಂತನು. ಎಲ್ಲರೂ ಪ್ರಾರ್ಥಿಸುವದು ಈ ದೇವರ ದೇವನನ್ನು. ಎಲ್ಲರೂ ಅಭಿವಂದಿಸುವದು ‘ ಮೂದೇವರ ನಾಮರೂಪ ಗುಣಗಳಳಿದುಳಿದ ಆ ದೇವರ ಪದಪದ್ಮಗಳನ್ನು ! ’ ಭಕ್ತರ ಭಾವದಂತೆ ಆತನು ಬಗೆಬಗೆಯ ನಾಮರೂಪ ಗಳನ್ನು ಧರಿಸಿದರೂ, ಎಲ್ಲರ ಗುರುದೇವನು ಆತನೇ! ಆಕಾಶದಿಂದ ಸುರಿದ ನೀರೆಲ್ಲ ಸಾಗರವನ್ನೆಯೆ ಸೇರುವಂತೆ! ಎಲ್ಲ ದೇವತೆಗಳಿಗೆ ಸಲ್ಲಿಸಲಾದ ವಂದನೆಗಳು ಆತನಿಗೆಯೆ ಸಲ್ಲುವವು. ಎಲ್ಲರೂ ಭಕ್ತಿಯನ್ನೂ–ಜ್ಞಾನವನ್ನೂ– ಶಕ್ತಿಯನ್ನೂ, ಶಾಂತಿಯನ್ನೂ, ಆತನಿಂದಲೇ ಪಡೆಯಲೆಳೆಸಿದರು. ಈ ರೀತಿ ಈ ಪುಣ್ಯಪುರುಷರೆಲ್ಲ ಒಂದೇ ಪರಮಾತ್ಮನ ಬಳಗದವರಲ್ಲವೇ ?

ಮನಸ್ಸನ್ನು ಕುರಿತು ಉಸುರಲಾದ ವಿಚಾರಗಳು ಎಲ್ಲರಲ್ಲಿ ಒಂದೇ ಮಾದರಿಯವು ಇರುವವು. ಮನವೇ ಮನುಜನ ಬಂಧಮೋಕ್ಷಗಳಿಗೆ ಕಾರಣ ವಾದುದು. ವಿಷಯಸಂಗದಿಂದ ಬಂಧ; ನಿರ್ವಿಷಯವಾದಾಗ ಮೋಕ್ಷ ಎಂಬುದು ಎಲ್ಲರ ಅಭಿಮತ. ಒಂದನ್ನು ತೊರೆದು ಇನ್ನೊಂದನ್ನು ಪಡೆಯಲು

ಎಲ್ಲರೂ ಮನಸ್ಸನ್ನು ಬಿನ್ನವಿಸಿರುವರು. ವಿಷಯವನ್ನು ಮೆಚ್ಚಿದ ಮಂಗ ಮನವು ತನುವೃಕ್ಷದ ದುರ್ಗುಣ ರೆಂಬೆಗಳಲ್ಲಿ ಹಾರಾಡುವದು; ದುರ್ವಿಷಯ ಗಳ ಹಣ್ಣುಗಳನ್ನು ಮೆಲ್ಲುವದು; ಹೆಣ್ಣನ್ನು ನೋಡಿ ಹಲ್ಲು ಕಿರಿಯುವದು; ವ್ಯಸನದ ಕೊಳ್ಳದಲ್ಲಿ ಮುಳುಗುವದು; ಜ್ಞಾನಿಗಳ ಮನೆಯನ್ನೆ ಸೇರದೆ ದುಷ್ಕರ್ಮಗಳ ಬನದಲ್ಲಿ ನಿರಂತರ ಅಲೆದಾಡುವದು. ಆದರೆ ಅದನ್ನು ಜರಿಯ ಬಾರದು. ಯಾಕೆಂದರೆ ಅದೇ ವಿರಕ್ತವಾಗಬಲ್ಲದು. ಭಕ್ತಿಯನ್ನು ಮಾಡ ಬಲ್ಲದು, ಸದ್ಗುರುವನ್ನು ಹೊಂದಬಲ್ಲದು, ಭಗವಂತನ ಪೂಜೆಯಲ್ಲಿ ಮೈಮ ರೆಯುಬಲ್ಲದು. ಇಂದ್ರಿಯಗಳನ್ನು ಆಳಿ ಯೋಗಸಿದ್ಧಿಯಿಂದ ಭಗವಂತನನ್ನು ಪಡೆಯಬಲ್ಲದು; ಆತ್ಮನ ನೆನೆದು ಆತ್ಮಾನಂದದಲ್ಲಿರಬಲ್ಲದು. ಮನವಳಿದು ಉನ್ಮನವಾಗದೆ ಆತ್ಮಾನಂದವೆಲ್ಲಿಯದು ?

ನಿಜವಾಗಿ ನೀರು–ಕ್ಷೀರಗಳು ಬೆರೆತಿರುವಂತೆ, ಪ್ರಾಣ–ಮನಗಳು ಬೆರೆ ತಿರುವವು. ಒಂದು ಚಲಿಸಲು ಇನ್ನೊಂದು ಚಲಿಸುವದು. ಒಂದು ಶಾಂತ ವಾಗಲು ಇನ್ನೊಂದು ಶಾಂತವಾಗುವದು. ಪ್ರಾಣನಿರೋಧವು ಬಿಗಿಯಾದುದು. ಅಷ್ಟಾಂಗ ಯೋಗದಿಂದಲೂ ಅದು ಬೇಗ ಸಾಧ್ಯವಾಗುವದಿಲ್ಲ. ಆದರೆ ಒಮ್ಮೆ ಗುರುಕರುಣವು ದೊರೆಯಿತೆಂದರೆ ಮನವು ಕೂಡಲೆ ಅಳಿಯುವದು. ಮಾನಸ- ಸರದಲ್ಲಿ ಮುಳುಗಿದ ಕಾಗೆಯು ಒಮ್ಮೆಲೆ ಹಂಸವಾಗುವಂತೆ, ಪರ ಮಾಮೃತದಲ್ಲಿ ಮುಳುಗಿದ ಹೀನ ಮನವು ಕೂಡ ಪರಮಾತ್ಮನ ತೇಜವನ್ನು ತಾಳಿ ಬೆಳಗುವದು. ಮನವಳಿಯಿತೆಂದರೆ ಇಂದ್ರಿಯ–ಪ್ರಾಣ–ಕರ್ಮಗಳೆಲ್ಲ ಅಳಿದು ಮನುಜನು ತಾನೆ ತಾನಾಗುವನು.

ಆದುದರಿಂದ ಎಲ್ಲ ಸತ್ಪುರುಷರು ಮನಸ್ಸಿನ ಮೇಲೆ ಮುನಿಸುಮಾಡದೆ ಅದನ್ನು ಪರಿಪರಿಯಿಂದ ಒಲಿಸಲು ಯತ್ನಿಸಿರುವರು. ಮನರಾಯ! ಮಾನಸ ರಾಜ ! ಮಾನಸೇಂದ್ರ ! ಎಂದು ಪ್ರೀತಿಯಿಂದ ಸಂಬೋಧಿಸಿ ಅದನ್ನು ಹುರಿಗೊಳಿಸಲು ಯತ್ನಿಸಿರುವರು. ಅದರಲ್ಲಿ ಸರಿಯಾದ ಅರಿವನ್ನುಂಟು ಮಾಡಲು ಹೆಣಗಿರುವರು. ಅವರ ಮನೋಬೋಧೆಯು ಈ ಬಗೆಯದು; ಸಂಸಾರವು ಸ್ಥಿರವಲ್ಲ; ಅದೊಂದು ನೀರಮೇಲಿನ ಬೊಬ್ಬುಳಿ; ಕ್ಷಣಿಕ; ದುಃಖಮಯ; ಹೆಣ್ಣು ಹೊನ್ನು ನಿತ್ಯವಲ್ಲ; ಯೌವನವು ಸುರಪತಿಕಾರ್ಮುಕ ದಂತೆ ಅನಿತ್ಯ. ಮೃತ್ಯುವು ಕ್ಷಣಕ್ಷಣಕ್ಕೆ ತ್ರಿಜಗವ ನುಂಗಲಿರುವ ಉರಗನ

ಮುಖದಿ ಸಿಕ್ಕುತಿಪ್ಪ ಕಪ್ಪೆ, ಎರಗುವ ನೊಣಕ್ಕೆ ಹಾರುವಂತೆ, ಕಾಲನ ದವಡೆಯಲ್ಲಿ ಸಿಲುಕಿದ ನೀನು ವಿಷಯಕ್ಕೆ ಎಳಸದಿರಯ್ಯ! ಬಾಲ್ಯ ಯೌವನದಲ್ಲಿ ಲೋಲುಪ್ತನಾಗದೆ ಶೂಲಿಯ ನೆನೆ. ಇವುಗಳ ಆಶೆಯಿಂದ ಘಾಶಿಯಾಗದೆ ಆಶೆಯನ್ನು ಈಶನಲ್ಲಿಡು. ಪರಮಾತ್ಮನು ಎಲ್ಲರನ್ನು ಸಲಹುತಿಹ. ಅದಕಾಗಿ ಎಲ್ಲ ಚಿಂತೆಯನ್ನು ತೊರೆದು ಶ್ರೀಕೃಷ್ಣನನ್ನು ಚಿಂತಿಸು. ಕಾಲನ ದೂತರ ಪಾಶವು ಕಾಲಿಗೆ ಬೀಳುವ ಮುನ್ನ ಮುರಾರಿಯ ಕೊಂಡಾಡು. ಇಂದ್ರಿಯಗಳನ್ನು ಕಟ್ಟಿ, ಆರು ಅರಿಗಳನ್ನು ಮೆಟ್ಟಿ, ಅರವಿನಿಂದ ದೃಷ್ಟಿಯ ನಿಲಿಸಿ, ದೇಹ ಭಾವವ ತೊರೆದು ಪರಬಿಂದುರುಚಿಯಲಿ ಮುಳುಗಿ, ನಲಿಯದೆ ನಿಜವಾದ ಸುಖದೋರದಯ್ಯ!

ಕೆಡದಿರು, ಕೆಡದಿರು, ಮಾನಸೇಂದ್ರ! ಒಡಲೊಳು ಜಡಮತಿಯಾಗಿ ಕೆಡದಿರು! ಮಾನವ ಜನ್ಮವನ್ನು ವ್ಯರ್ಥ ಕಳೆಯದಿರು. ಶರಣರ ನಂಬು. ಅವರ ಕಿಂಕಿರನಾಗು. ಸತ್ಸಂಗ ಮಾಡು, ಚಿತ್ಸುಕ ನೋಡು. ಬೇಡುವದಾದರೆ ಭಗವಂತನನ್ನು ಬೇಡು. ಆತನನ್ನಲ್ಲದೆ ಆರಬೇಡಿದರಿಲ್ಲ ಕಾಣಯ್ಯ! ಕೊಡುವವನು ಕೊಳ್ಳುವನನು ದೇವನು. ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬರುವದು. ಆತನೊಯ್ಯ ಬಯಸಿದರೆ ಕೈಯಲಿದ್ದುದೂ ಅರಗಳಿಗೆಯಲ್ಲಿ ಇಲ್ಲದಂತಾಗುವದು. ಅದಕ್ಕಾಗಿ ಎಲ್ಲದಕ್ಕೂ ದೇವನನ್ನು ಬಿಡದೆ ಬೆಂಬತ್ತು.

ಜರಾಮರಣ ಬರುವ ಮುನ್ನವೇ ಆತನನ್ನು ಪೂಜಿಸು. ಸುಖವಿರಲಿ ದುಃಖವಿರಲಿ, ಆತನ ನೆನವನ್ನು ಮರೆಯದಿರು. ಪರಮಾತ್ಮನ ನಾಮವೇ ಭವಸಾಗರವನ್ನು ದಾಟುವ ದಿವ್ಯ ದೋಣಿ. ಜಪ ಬೇಡ, ತಪ ಬೇಡ; ವೃತ ಬೇಡ, ಉದ್ಯಾಪನೆ ಬೇಡ; ತೀರ್ಥ ಬೇಡ, ಕ್ಷೇತ್ರ ಬೇಡ; ಪುಸ್ತಕ ಬೇಡ, ಪಾಂಡಿತ್ಯ ಬೇಡ; ಇದಾವದೂ ನಿನಗೆ ಅಂತ್ಯಕಾಲಕ್ಕೆ ನೆರವಾಗವು. ಭಗವಂತನ ನಾಮವೊಂದೆ ಸಾಕು. ಗುರುಮೂರ್ತಿಯ ನೆರವಿನಿಂದ ನಿನ್ನ ನಿಜವ ತಿಳಿ. ನಿಜವನರಿಯುವುದೇ ನಿಜ ಜ್ಞಾನ.. ಅದನ್ನೆಂದೂ ಮರೆಯದೆ ದೃಢಪಡಿಸಯ್ಯ ಮಾನಸರಾಜ! ಎಂದು ಎಲ್ಲರೂ ತಮ್ಮ ತಮ್ಮ ಮನಸಿಗೆ ಬೋಧಿಸಿರುವರು.

ಇನ್ನು ನಡೆನುಡಿಯನ್ನು ಕುರಿತು ಅವರು ಹೇಳಿದ ಮಾತುಗಳನ್ನು ನೋಡಿ. ಅವುಗಳಲ್ಲಿಯೂ ತುಂಬ ಸಾಮ್ಯವಿರುವುದು. ಆತ್ಮೋನ್ನತಿಯ ಮೇಲುದಾರಿಯನ್ನು ತುಳಿಯಬಯಸುವ ಮನುಜನು ಮೊದಲು ತನ್ನಲ್ಲಿ

ವಿವೇಕವನ್ನು ಎಚ್ಚರಿಸಬೇಕು. ದಿನದಿನದಿ ಮನವ ಶೋಧಿಸಿ ನಿತ್ಯ—ಅನಿತ್ಯ, ಧರ್ಮ—ಅಧರ್ಮ, ಒಳಿತು—ಕೆಡಕು, ಇವುಗಳನ್ನು ವಿಂಗಡಿಸಲು ಕಲಿಯಬೇಕು. ತಮ್ಮ ಜೀವನವನ್ನು ಅಡಿಗಡಿಗೆ ಪರೀಕ್ಷಿಸಬೇಕು. ಬರಿ ಇಹದ ಚಿಂತಿಯನ್ನು ತೊರೆದು ಇಹ–ಪರಗಳೆರಡನ್ನೂ ವಿಚಾರಿಸಬೇಕು. ಚರ್ಮ ದೃಷ್ಟಿಯಿಂದ ಇಹವನ್ನು ಕಾಣುವಂತೆ, ಜ್ಞಾನದಷ್ಟಿಯಿಂದ ಪರವನ್ನು ಕಾಣಲೆಳಸಬೇಕು. ಅಂದರೆ ಅವನಿಗೆ ಜಗತ್ತಿನ ಯಥಾರ್ಥ ಪರಿಚಯವಾಗುವದು. ಇಹಸುಖದ ಸರಿಯಾದ ಸ್ವರೂಪವು ತಿಳಿಯುವದು. ಮತ್ತು ಇಲ್ಲಿ ದುಃಖ ಬೆರೆಯದ ಸುಖವೇ ದುರ್ಲಭ, ವಿಷಯಸುಖವು ಖಡ್ಗಧಾರೆಯ ಮೇಲಿನ ಮಧುಘೃತ, ಅದನ್ನು ನೆಕ್ಕುವವನ ನಾಲಿಗೆ ಸೀಳದಿರದು. ಎಂಬುದೂ ಹೊಳೆಯುವದು.

ಆದುದರಿಂದ ‘ ಬೊಟ್ಟೆನಿತು ಸುಖಕಾಗಿ, ಬೆಟ್ಟದೆನಿತು ದುಃಖವನ್ನುಣಬೇಡಿರಯ್ಯ ! ಮೈಸುಖಕ್ಕೆ ಮರುಳಾಗದೆ ಅತ್ಮಸುಖವ ವಡೆಯಿರಿ ! ಪರಸತಿಯ ನೋಡದಿರಿ. ಪರಧನವ ಬೇಡದಿರಿ. ಹೆಣ್ಣು ನೋಂಕದ ಮನ ಪುಟವೇರುತಿಹುದು. ಅದೇ ಹೆಣ್ಣಿನ ತೋಳ್ಬಲೆಗೆ ಬಿದ್ದಾಗ, ಪೊಣ್ಣ ಪೊಣ್ಣನೆ ಹಾರುವ ಎರಳೆ ಮೋಸದಿಂದ ಕಾಲು ಕಣ್ಣಿಗೆ ಸಿಲುಕಿದಂತಾಗುವದು. ನೆಯ್ಯಿಂದ ಕಿಚ್ಚು ಹೆಚ್ಚುವಂತೆ, ಅಬಲೆಯರಿಂದ ಕಾಮಾಗ್ನಿಯು ಬೆಳೆಯುವದಯ್ಯ ! ಅದನ್ನು ಆತ್ಮರಸದ ನೀರಿನಿಂದ ನಂದಿಸಿರಿ ! ’

ಅದಕ್ಕಾಗಿ ಸತ್ಯ–ಪ್ರೇಮ–ಸಂಯಮದಿಂದ ಅಂತರಂಗ ಬಹಿರಂಗ ಶುದ್ಧಗೊಳಸಿರಿ ! ಸ್ವಧರ್ಮವನಾಚರಿಸಿರಿ. ಕಾಯಿಕ ವಾಚಿಕ–ಮಾನಸಿಕ ತಪವ ಕೈಕೊಳ್ಳಿರಿ. ಆದರೆ ಇದನ್ನೆಲ್ಲ ಪ್ರಾಮಾಣಿಕತನದಿಂದ ನಡೆಯಿಸಿರಿ. ಬರಿ ಉದರವೈರಾಗ್ಯ ಬೇಡ, ಬಾಹ್ಯಾಡಂಬರದ ಡಂಭಾಚಾರ ಬೇಡ. ಕೇವಲ ಮನಮೆಚ್ಚಿ ನಡೆಯಿರಿ, ಕೇವಲ ಜನಮೆಚ್ಚಿ ನಡೆಯದಿರಿ. ಶ್ವಾನಶೂಕರರಂತೆ ಬರಿ ಹೊಟ್ಟೆಯ ಹೊರಕೊಳ್ಳುವದರಲ್ಲಿಯೆ ಕಾಲ ಕಳೆಯದೆ ಅದನ್ನು ಹಾಳುಗೊಳಿಸದೆ ಬಲ್ಲವರ ಬಳಿ ನಿಲ್ಲಿರಿ. ಶಾಸ್ತ್ರ ಸಾರವ ತಿಳಿಯಿರಿ. ಅವರ ನಡೆಯಂತೆ ನಡೆಯಿರಿ. ಸದ್ಭಾವನೆಯ ಬೆಳೆಯಿಸುವ ಅಭ್ಯಾಸ ಮಾಡಿರಿ. ಸ್ವಾನುಭವವಿಲ್ಲದ ಜ್ಞಾನ ಕಾನನದ ಬೆಳದಿಂಗಳು. ಅದರಿಂದ ಅದಾರಿಗೆ ಪ್ರಯೋಜನ ? ಆದುದರಿಂದ ಸ್ವಾನುಭವವನ್ನು ವಡೆಯಲಣಿಯಾಗಿರಿ.

ಸತ್ಯವ ನುಡಿಯಿರಿ, ನುಡಿದಂತೆ ನಡೆಯಿರಿ, ನುಡಿಯದೆಯೆ ನಡೆಯಿರಿ, ನಡೆಯೆ ನುಡಿಯಾಗಲಿ. ತನ್ನಂತೆ ಪರರ ಬಗೆಯಿರಿ. ದಯೆಯೆ ಧರ್ಮದ ಮೂಲವೆಂಬುದನ್ನು ಮರೆಯದೆ ಬಡವರಿಗೆ ಅನ್ನವಸ್ತ್ರಗಳನ್ನೀಯರಿ! ಜೀವನವು ಕ್ಷಣಭಂಗುರವಿದ್ದಮೂಲಕ, ನಾಳಿನ ಧರ್ಮಕಾರ್ಯವನ್ನು ಇಂದು ಮಾಡಿರಿ, ಸದ್ಗುರುಗಳಿಗೆ ಶರಣು ಹೋಗಿ ತನುವ ದಂಡಿಸಿರಿ, ಮನವ ಖಂಡಿಸಿರಿ. ಹಾಳು ಆಶೆಯ ತೊರೆಯಿರಿ. ನೈರಾಶ್ಯ ಮೂಲ ವಿರತಿಯ ಬೆಳೆಯಿಸಿರಿ. ವಾಣಿ–ಪಾಣಿ–ಮಾಣಿಗಳನ್ನು (ಮನಸ್ಸನ್ನು) ಕಟ್ಟಿ, ವಿಷಯತೃಣಕ್ಕೆ ಉರಿಯಾಗಿರಿ. ಭವತೊರೆಯಲ್ಲಿ ಕಲ್ಲಾಗಿರಿ, ಬಲ್ಲವರಲ್ಲಿ ಬಿಲ್ಲಾಗಿರಿ. ಬಾಂಧವರಲ್ಲಿ ಬೆಲ್ಲಾಗಿರಿ. ಕಾಲನ ದಾಳಿ ಬಾರದ ಮುನ್ನ ಧರ್ಮವ ಕೈಕೊಳ್ಳಿ. ಏಕೋಭಾವದಿಂದ ಭಗವಂತನನ್ನು ಭಜಿಸಿರಯ್ಯ! ಮಾನವ–ಜನ್ಮದಲ್ಲಿಯೆ ಇದೆಲ್ಲ ಸಾಧ್ಯ. ಇಂಥ ಉತ್ತಮವಾದ ನರಜನ್ಮವನ್ನು ವ್ಯರ್ಥವಾಗಿ ಕೆಡಿಸಿ, ನಿಮ್ಮ ಹಾನಿಯನ್ನು ಮಾಡಬೇಡಿರಯ್ಯ! ಎಂಬುದು ಎಲ್ಲರ ಉಪದೇಶದ ತಿರುಳು'

ಮಹಾಮಹಿಮರಾದ ಸಂತರನ್ನೂ ಅವರ ಪಾವನ ಸಹವಾಸವನ್ನೂ ಎಲ್ಲರು ನಮನಾಗಿಯೆ ಹೊಗಳಿರುವರು. ಸಂತರ ವದನವು ಪ್ರಸಾದದ ಸದನವು, ಹೃದಯದಲ್ಲಿ ದಯೆ, ಮಾತಿನಲ್ಲಿ ಸುಧೆ, ಕೃತಿಯಲ್ಲಿ ಪರೋಪಕಾರ. ಗಂಗೆಯು ಪಾಪವನ್ನು, ಶಶಿಯು ತಾಪವನ್ನು, ಕಲ್ಪತರುವು ದೈನ್ಯವನ್ನು ಕಳಿದರೆ, ಶರಣರು ಈ ಮೂರನ್ನೂ ಅಲ್ಲಗಳೆಯುವರು. ಅದೂ ಅದ್ಭುತರೀತಿಯಿಂದ. ಗಂಗೆಯ ಸ್ಪರ್ಶದಿಂದ ಪಾಪವು ಹೋದರೆ ಸಜ್ಜನರ ನೋಟದಿಂದ ಅದು ತೆರಳುವದು. ಚಂದ್ರನ ಶೈತ್ಯದಿಂದ ತಾಪವು ಅಳಿದರೆ, ಸಂತರ ನೆನವಿನಿಂದಲೇ ಅದು ಇಲ್ಲದಂತಾಗುವದು. ಕಲ್ಪವೃಕ್ಷವು ಕಲ್ಪಿಸಿದವರ ದೈನ್ಯವ ಕಳೆದರೆ, ಸತ್ಪುರುಷರು ಕಲ್ಪಿಸದವರ ದೈನ್ಯವನ್ನು ನಾಶಗೊಳಿಸುವರು. ಶರಣರ ನೆರೆ ನಿಧಾನದ ಕೆರೆ, ಮರೆ ವಜ್ರದ ಪರೆ (ಕವಚ), ಸಿರಿ ಆತ್ಮದ ಝರಿ, ಕರೆ ಆನಂದದ ಥೆರೆ, ಅವರು ಇದ್ದೆಡೆಯು ಕ್ಷೇತ್ರದ ಧಡಿಯು, ಕೃಪಾಂಗವು ಭವಭಯ ಭಂಗವು.

ಇಂಥ ಸತ್ಯವರು ಸತ್ತರೆಂದೆನಬೇಡ. ಹೆತ್ತಮ್ಮ ಮಗನ ಕರೆವಂತೆ ಅವರು ನಿಮ್ಮನ್ನು ಎತ್ತಿಕೊಂಬುವರು. ' ಇಲ್ಲವೆನಬಾರದೆಲೆ । ಇಲ್ಲುಂಟು

ಧರ್ಮಗಳು। ಕಲ್ಲೊಳಗೆ ಅಡಗಿರ್ದ ಪರುಷದಂತೆ' ಜ್ಞಾನವು ಅಜ್ಞಾನವನ್ನೊ, ಜೋತಿಯು ಕತ್ತಲೆಯನ್ನು, ಪರುಷವು ಅವಲೋಹವನ್ನು, ಕೆಡಿಸುವಂತೆ ಶರಣರು ಭವವನ್ನು ಕೆಡಿಸುವರು. ಮರಮರ ಮಥನಿಸಿ ಅನುಭಾವ ಹುಟ್ಟಿ, ತನು ಮನ ಗುಣಗಳನ್ನು ಸುಡುವದು. ಶರಣರ ಸಂಗ ಕರ್ಪುರ–ಗಿರಿಯು ಉರಿಯಕೊಂಡಂತೆ. ಅರಿಯುದವರ ಸಂಗ ಕಲ್ಲು ಹೊಯ್ದು ಕಿಡಿಯು ತೆಗೆದರೆ, ಬಲ್ಲವರ ಸಂಗ ಹೊಸೆದು ಬೆಣ್ಣೆಯ ತೆಗೆವುದು.

ಆದುದರಿಂದಲೆ ಸೂರ್ಯನ ಉದಯವು ತಾವರೆಗೆ ಜೀವಾಳವಾದಂತೆ, ಚಂದ್ರನ ಉದಯವು ನೈದಿಲೆಗೆ ಜೀವಾಳವಾದಂತೆ, ಶರಣರ ಬರವು ಮುಮುಕ್ಷುಗಳಿಗೆ ಜೀವಾಳವಾಯಿತು. ಶರಣರ ಆಗಮನದಿಂದ ಸಾಸಿವೆಯ ಮೇಲೆ ಸಾಗರವರಿದಂತಾಯಿತು ಅವರಿಗೆ. ಶರಣರ ಸಂಗದಲ್ಲಿ ಅವರು ನಲಿನಲಿದಾಡಿದರು, ಕುಣಿಕುಣಿದಾಡಿದರು. ಇಷ್ಟೇ ಅಲ್ಲ. ಶರಣರ ಸಂಗದಲ್ಲಿ ಅವರು ಶಿವನ ಹಂಗನ್ನು ತೊರೆದರು. ಶಿವನಿಂದ ಶರಣರು ಅಧಿಕರೆಂದೆನಿಸಿದರು ಅವರಿಗೆ. ಆದುದರಿಂದ 'ಶರಣರ ಭೃತ್ಯನಾಗಿಸಯ್ಯ ಶಿವ! ಅವರ ಪಾದವ ತೊಳೆವೆ, ಪಡುಗೆಯ (ಪಾತ್ರೆಯ) ಬೆಳಗುವೆ, ಹಾವುಗೆ ಪಿಡಿವೆ, ಅಡಿಯ ಒರಸುವೆ. ಉಂಡುಳಿದುದನು ಉಣ್ಣುವೆ, ಉಟ್ಟು ಬಿಟ್ಟುದುದನು ಉಡುವೆ, ಉಗಿದ ತಂಬುಲ ಸವಿವೆ. ಅಂಗಳ ಗುಡಿಸಿ, ಬಾಗಿಲ ಕಾಯುವೆ. ಎತ್ತಾಗಿ ತೊತ್ತಾಗಿ, ಸೊಣಗನಾಗಿ ಅವರ ಬಳಿಯಿರುವೆ. ಶರಣರ ಸೇವೆಯನ್ನೆನಗೆ ದಯಪಾಲಿಸಯ್ಯ ಎಂದವರು ಭಗವಂತನನ್ನು ಪರಿ ಪರಿಯಾಗಿ ಬೇಡಿಕೊಂಡರು.

ಸದ್ಗುರುವಿನ ರೂಪ–ಗುಣ ಕರ್ಮಗಳನ್ನು ಎಲ್ಲರೂ ಒಂದೇ ಬಗೆಯಾಗಿ ಬಣ್ಣಿಸಿರುವರು. ಸದ್ಗುರುವು ಸಚ್ಚಿದಾನಂದನು–ಪೂರ್ಣಬ್ರಹ್ಮನು, ಸರ್ವತ್ರ ತಳಿತಳಿಸುವ ದಿವ್ಯ ಭಾನು ಆತ. ಸದ್ಗುರು ಸೌಖ್ಯಂಗಳ ಸಾರ. ನಿಜಸುಖದ ಸಾಗರ. ಅವನ ಮೈಯಲ್ಲ ಕಣ್ಣು, ಮೈಯೆಲ್ಲ ಮನಸು, ಮೈಯೆಲ್ಲ ಪ್ರಭೆ, ಮೈಯೆಲ್ಲ ಆನಂದ. ಪರಮನ ರೂಪದಲ್ಲಿ ನಿಂತು ಭಕ್ತರಿಗೆ ನೆರವೀಯಲರಿಯದೆ ನರನಾಗಿ ಬಂದ ಮಹಾದೇವನೆ ಸದ್ಗುರು. ಪರತತ್ವ ನನ್ನೊಳಗೆ ಎರವಿಲ್ಲದೆ ಇರುತಿದ್ದರೂ ಆತ ಪರದೇಶಿಯಂತೆ ಇರುವ. ಕರುಣ ಔದಾರ್ಯಗಳು ಅವನ ವರಗುಣಗಳು. ಬಯಸಿ ಬೇಡಿದರೆ ಆತ ಬೇಡಿದ್ದನೀವ, ಬಯಸದೆ ಬೇಡಿದರೆ ತನ್ನನೀವ.

ಸದ್ಗುರು, ದೃಷ್ಟಿ–ಧ್ಯಾನ–ಸ್ಪರ್ಶ, ಈ ಮೂರು ವಿಧದಿಂದ ಕರುಣಿಸುವ. ಮತ್ಸ್ಯವು ಶರಧಿಯಲ್ಲಿ ಅಂಡವನ್ನು ಕಂಡ ಕ್ಷಣ ಅದು ಮತ್ಸ್ಯವಾಗುವಂತೆ, ಗುರುವಿನ ಕರುಣ ಕಟಾಕ್ಷದಿಂದಲೇ ಶಿಷ್ಯನು ಗುರುವಾಗುವ. ಆವೆಯು ಕೇವಲ ನೆನೆವಿನಿಂದಲೇ ತತ್ತಿಯನ್ನು ಆವೆಯನ್ನಾಗಿ ಮಾರ್ಪಡಿಸುವಂತೆ, ಗುರುವು ತನ್ನ ನೆನವಿನಿಂದಲೇ ಶಿಷ್ಯರಿಗೆ ಗುರುತ್ವವನ್ನು ನೀಡುವ. ಪಕ್ಷಿಯು ತನ್ನ ಸ್ಪರ್ಶದಿಂದಲೇ ಅಂಡಕ್ಕೆ ಪಕ್ಷಿಯ ರೂಪವನ್ನು ಕೊಡುವಂತೆ ಗುರುವಿನ ಸ್ಪರ್ಶವು ಶಿಷ್ಯರಿಗೆ ಗುರುವಿನ ಮಹಿಮೆಯನ್ನು ದಯಪಾಲಿಸುವದು. ಈರೀತಿ 'ಸದ್ಗುರು ಕೆಲರಂ ನೋಡಿ, ಕೆಲರಂ ಆಡಿ, ಕೆಲರಂ ಕೂಡಿ' ದೇವರನ್ನಾಗಿ ಮಾಡುವ. ತನ್ನ ನೋಟದಿಂದ ಅಜ್ಞಾನತಿಮಿರವನ್ನು ಕಳೆಯುವ, ಕರುಣಾಂಬುವಿನಿಂದ ಮಲಿನವ ತೊಳೆಯುವ. ಆತನ ಪದಪದ್ಮದ ಆಮೋದವು ದುರ್ವಾಸನೆಯನಳಿಸುವದು. ಸದ್ಗುರುವಿನ ಸಂಗದಲ್ಲಿ ಮರವಿನ ಅಂಜಿಕೆಯೆ ಇರುವದಿಲ್ಲ. ಯಾಕಂದರೆ ರವಿಯ ತುರಂಗಗಳಿಗೆ ತಿಮಿರದ ಭಯವುಂಟೇ?

ಈತನನ್ನು ಅರಿತು, ಮರಿತು, ಹೇಗೆಯೋ ಆಗಲಿ, ನೆನದರೆ ತೀರಿತು. ಇವನು ಕ್ಷೇತ್ರ ಶುದ್ಧ ಮಾಡಿ, ಬೀಜವ ಬಿತ್ತುವ, ಆಶಾಪಾಶವ ಬಿಡಿಸುವ, ಪರಮಾರ್ಥಸಾಧನವ ಮಾಡಿಸುವ, ಪರತತ್ವವ ತೋರಿಸುವ. ಶಿಷ್ಯನ ಭಕ್ತಿ ಭಾವವನ್ನು ಸಹ ನೋಡದೆ, ಆತನಿಗೆ ಮುಕ್ತಿಯನ್ನೀಯುವ. ಇಂಥ ಗುರುವಿನ ಉಪಕಾರವನ್ನು ಅದೆಂತು ಬಣ್ಣಿಸುವದು? ಆದುದರಿಂದ ಎಲ್ಲ ಹಿರಿಯರು ಸದ್ಗುರುವಿನ ಚರಣಕಮಲದಲ್ಲಿ ಭೃಂಗವಾಗಲು ಬೋಧಿಸಿದರು.

ಪರಮಾತ್ಮನೆಡೆಗೆ ಸಾಗುವ ಪಥವು ಒಳ್ಳೆಯ ದುರ್ಗಮವಾದುದು. ಅದು ಕತ್ತಿಯ ಮೇಲಿನ ಕುಣಿತ. ಅದನ್ನು ಸದ್ಗುರುವಿನಿಂದಲೇ ಅರಿತುಕೊಳ್ಳಬೇಕು. ಅವನಿಂದ ಸರಿಯಾದ ಬೋಧೆಯನ್ನೂ ಮಂತ್ರವನ್ನೂ ಪಡೆದು ಆ ಸಾಧನವನ್ನು ಶ್ರದ್ಧೆಯಿಂದಲೂ, ಪ್ರೀತಿಯಿಂದಲೂ, ನಿಷ್ಠೆಯಿಂದಲೂ, ದೀರ್ಘಕಾಲ, ನಿರಂತರವಾಗಿ ನಡೆಯಿಸಬೇಕು. ಯಾಕಂದರೆ ತಿಳಿಸಿದುದು ಸರಿಯಾಗಿ ತಿಳಿದು, ಹೊಳೆದು, ಇಳಿದು, ಉಳಿಯಬೇಕಾದರೆ, ಅನುಭಾವ ಮೊಳೆಯಬೇಕಾದರೆ, ಬೆಳೆಯಬೇಕಾದರೆ ಅದು ಅತ್ಯಗತ್ಯ. ಎಂದು ಎಲ್ಲರೂ ಒತ್ತಿ ಹೇಳುವರು. ಅವರ ಹೇಳಿಕೆಯ ವಿವರಗಳಲ್ಲಿ ಕೆಲವಿಭೇದಗಳು ಕಾಣಿಸಿದರೂ ಅದರ ತಿರುಳು ಒಂದೇಯಿರುವದು.

ಕಲಿಯುಗದಲ್ಲಿ ಯಜ್ಞ-ದಾನ-ತಪಗಳು ಸರಿಯಾಗಿ ನೆರವೇರುವದು ಸಾಧ್ಯವಿಲ್ಲ ಆದುದರಿಂದ ಈ ಯುಗದಲ್ಲಿ ಹರಿಯನ್ನು ಪಡೆಯಲು ನಾಮ ವೊಂದೇ ಲೇಸು. ನರವೃಂದ ಕಾನನದಲ್ಲಿ ನಾಮವೆಂಬ ಕಲ್ಪತರುವು ಹುಟ್ಟಿರು ವದು. ಅದನ್ನಾಶ್ರಯಿಸಿ ಬೇಕಾದುದನ್ನು ಪಡೆಯ ಬಹುದು. ನಾಮದ ನೆರವಿ ನಿಂದ ತನು ಭಾಂಡ ತೊಳೆದು, ಮನದ ಮುಸುರಿಯ ಕಳೆದು, ಮನೆಯನ್ನು ಬಳಿದು, ತ್ರಿಗುಣದ ಒಲೆಗುಂಡುಗಳನ್ನು ಅದರಲ್ಲಿಟ್ಟು, ವಿರಕ್ತಿಯ ಮಡಿಯ ನ್ನುಟ್ಟು, ಭಕ್ತಿಯ ನೀರನ್ನು ಎಸರಿಟ್ಟು, ಅರಿವೆಂಬ ಬೆಂಕಿಯ ಕೊಟ್ಟು, ಮಾಯಾಮದವೆಂಬ ಕಾಷ್ಟವ ಸುಟ್ಟು, ಕರುಣವೆಂಬ ಸಾಮಗ್ರಿಯಿಂದ ಮೋಕ್ಷದ ಪಾಕವನ್ನು ಸಿದ್ಧಪಡಿಸಿ, ಅದನ್ನು ಗುರುಶರಣರು ಸವಿಯಬೇಕು. ಚಿಂತಿಯ ತೊರೆಯಬೇಕು. ಶಾಂತಿತವವ ಮಾಡಬೇಕು. ಈ ಬಗೆಯಾಗಿ ಹರಿಯ ನೆನವಿನಿಂದ ಪಾಪವ ಸುಟ್ಟು, ಹರಿಚರಣವ ಮುಟ್ಟಬೇಕು. ಹರಿ ಹರಿ! ಎಂದು ಚೀರಿ, ಹಾರಿ ಭೋರಿಡುತಲಿ ಕುಣಿಯ ಬೇಕು, ಸಾರಿ ಸಾರಿಗೆ ಹರಿನಾಮವ ಬೀರಿ, ಬೀರಿ, ಕೊಂಡಾಡಬೇಕು. ಭಕ್ತಜನರ ಕೂಡಿ ಭಕ್ತಿ ಯಿಂದ ಪಾಡಿ, ಕುಣಿದು ತಣಿಯಬೇಕು. ದುರಿತದ ಬಾಧೆಯ ಬಿಡಿಸಲು ನಾಮವೊಂದೆ ಸಾಕು. ಅದನ್ನು ಕೂಡುವಾಗ, ಹಾಡುವಾಗ, ಹರಿದಾಡುವಾಗ ಜ್ವರ ಬಂದಾಗ, ಛಳಿ ಬಂದಾಗ, ಇರುಳು ಹಗಲು ಅಂತರಂಗದಲ್ಲಿ ಇರಿಸ ಬೇಕು.

ನಾಮಸ್ಮರಣೆಯ ಜತೆಯಲ್ಲಿ ಆತ್ಮಧ್ಯಾನವನ್ನು ಮಾಡಲೂ ಕೆಲವರು ಹೇಳಿರುವರು. ಸ್ಥಿರಾಸನದಲ್ಲಿ ಕುಳಿತು, ನಾಸಾಗ್ರದಲ್ಲಿ ದೃಷ್ಟಿಯನ್ನು ನಿಲಿಸಿ, ಮೂಲ ಮಂತ್ರವ ಜಪಿಸಿ, ಅಂತರಂಗದಲ್ಲಿ ಭಗವಂತನ ಮಂಗಲ ರೂಪವನ್ನು ನೆನೆಯಬೇಕು. ಕಲಿತು ಮರೆತ ಪದ್ಯವೊಂದನ್ನು ಒಳಗೆ ಒಳಗೆ ಆಲೋಚಿಸು ವಂತೆ, ತಿಳಿವು ಬೆಳೆದು ತನ್ನ ರೂಪೆಂದು ಭಾವಿಸಿ, ಆ ನೆನವು ಮೈಯೊಳಗೆ ಆಡಲು ಆತ್ಮತೋರುವ. ಕೆಲವರು ಭಗವಂತನ ಮಾನಸ ಪೂಜೆಯನ್ನು ಮಾಡಲು ಹೇಳಿರುವರು. ಅವುಗಳಲ್ಲಿ ಎರಡು ಬಗೆ. ಒಂದು ಪಿಂಡದಲ್ಲಿಯ ಆತ್ಮನದು. ಇನ್ನೊಂದು ಬ್ರಹ್ಮಾಂಡದಲ್ಲಿಯ ಪರಮಾತ್ಮನದು. ಪರಮಾತ್ಮನ ರೂಪವನ್ನು ಕಲ್ಪಿಸಬೇಕೆಂದು ಕೆಲವರು. ಅದು ತಾನಾಗಿಯೇ ಪ್ರಕಟವಾಗ ಬೇಕೆಂದು ಕೆಲವರು. ಕಲ್ಪಿಸಿದುದೆ ಸ್ಥಿರವಾಗಿ ಮುಂದೆ ಪ್ರಕಟವಾಗುವ

ದೆಂದು ಕೆಲವರು. ಸದ್ಗುರುಗಳು ಕರುಣಿಸಿದ ಸಬೀಜ ನಾಮದಿಂದಲೇ ರೂಪವು ಮೈದಾಳುವದೆಂದು ಕೆಲವರು. ನಾಮದ ನೆನವು ಮಾತ್ರ ಎಲ್ಲರಿಗೂ ಸಮಾನವಾದುದು.

ಎಂಥ ಸಂಕಟ ಬಂದರೂ ನಾಮವನ್ನು ಎಂದೂ ಬಿಡಬಾರದು. ಭಗವಂತನು ತನ್ನ ಶರಣರನ್ನು ಪರೀಕ್ಷಿಸಲು ಎಷ್ಟೋ ಸಲ ಅವರೆದುರು ಸಂಕಟಗಳನ್ನು ಬೇಕೆಂದು ಒಡ್ಡುವನು. ಆತನು ಭಕ್ತನ ತನುವನಲ್ಲಾಡಿಸಿ ನೋಡುವ. ಮನವನಲ್ಲಾಡಿಸಿ ನೋಡುವ, ಧನವನಲ್ಲಾಡಿಸಿ ನೋಡುವ. ಕಡಿದು, ಕೊರೆದು, ತೇದೊಡೆಯೂ ಚಂದನವು ತನ್ನ ಕಂಪನ್ನು ಬಿಡದಂತೆ' ಬೆಂಕಿಯಲ್ಲಿ ಬೆಂದ ಸುವರ್ಣವು ಕಳಂಕವನ್ನು ಹಿಡಿಯದಂತೆ, ಗಾಣದಲ್ಲಿಕ್ಕಿದ ಕಬ್ಬು ತನ್ನ ಸವಿಯ ಬಿಡದಂತೆ, ಭಕ್ತನು ಶರಣೆಂಬುದ ಬಿಡಬಾರದು. ಇರಿದರೂ, ತರಿದರೂ, ಜರಿದರೂ, ಕೊರೆದರೂ.—ಇವಕ್ಕೆಲ್ಲ ಅಂಜದಿರ್ದಡೆ ಭಕ್ತಿಕಂಪಿತನಾಗಿ ಭಗವಂತನು ಒಲಿಯುವನು. ಆತನ ನೆನಹವೇ ಉದಯ, ಮರಹವೇ ಅಸ್ತಮಾನ ಆಗಬೇಕು ಭಕ್ತನಿಗೆ. ಪರಮಾತ್ಮನ ನೆನವಿನಲ್ಲಿ ಭಕ್ತನ ಮನವು ಬೆರೆಯಬೇಕು ತನುವು ಕರಗಬೇಕು. ಮೈಮೇಲೆ ಪುಳಕಂಗಳು ಏಳಬೇಕು. ಕಂಗಳಿಂದ ಕಂಬನಿಗಳು ಸುರಿದು, ನುಡಿಯಲ್ಲಿ ಗದ್ಗದಂಗಳು ಹೊರಹೊಮ್ಮಬೇಕು. ಹೃದಯದಲ್ಲಿ ನಾಮಾಮೃತವು ತುಂಬಿ, ಬಿರಿಮುಗುಳಂತೆ ಹೃದಯವು ಅರಳಬೇಕು. ಮನಸ್ಸು ದೇವರ ಚರಣಕಮಲದಲ್ಲಿ ' ಬಂಡನುಂಬತುಂಬಿ ' ಯಾಗಲು ಎಳೆಸಬೇಕು.

ನಿಜವಾಗಿ ನಾಮವೇ ವಿಠ್ಠಲನ ಧಾಮ. ಅಂಕುಶಕ್ಕೆ ಕರಿಯೂ, ವಜ್ರಕ್ಕೆ ಗಿರಿಯೂ, ಜ್ಯೋತಿಗೆ ಕತ್ತಲೆಯೂ ಅಂಜುವಂತೆ, ನಾಮದ ನೆನವಿಗೆ ಮರಹವು ಹೆದರುವದು. ನಾಮವು ಭಗವಂತನ ಒಲವನ್ನೆಯೆ ಪಡೆಯುವದು. ಮತ್ತು ದೇವರ ಒಲವಿಗೆ ಅಸಾಧ್ಯವಾದುದು ಆವುದು ? ಭಗವಂತನು ಒಲಿಯಲು ಕೊರಡು ಕೊನರುವದು, ಬರಡು ಹಯನಹುದು, ವಿಷವು ಅಮೃತವಹುದು. ಅಂದಮೇಲೆ ಭಕ್ತನ ಮನೋರಥಗಳೆಲ್ಲ ಪೂರ್ಣವಾಗುವದರಲ್ಲಿ ಏನಾಶ್ಚರ್ಯ ?

ಸಾಧನ ಪಥದಲ್ಲಿ ಸಾವಿರ ವಿಘ್ನಗಳು. ಕ್ಷುಧೆ–ತೃಷೆ, ನಿದ್ರೆ–ಆಲಸ್ಯಾದಿ ತನುವಿಕಾರಗಳೂ ಸಂಕಲ್ಪ–ವಿಕಲ್ಪ ಕಾಮ-ಕ್ರೋಧಾದಿ ಮನೋವಿಕಾರಗಳೂ

ಸಾಧಕನನ್ನು ಆಗಾಗ ಮರುಳುಗೊಳಿಸುತ್ತವೆ. ಅದರಿಂದ ಭಕ್ತಿಭಾವವು ಎಷ್ಟು ಹೆಣಗಿದರೂ ಬೆಳೆಯುವದಿಲ್ಲ. ವಿವೇಕವು ಮನಸ್ಸನ್ನು ಒಂದೆಡೆ ಎಳೆದರೆ, ಕೀಳು ಆಶೆ ಆಕಾಂಕ್ಷೆಗಳು ಅದನ್ನು ಇನ್ನೊಂದೆಡೆ ಸೆಳೆಯುವವು. ಈ ಎಳೆದಾಟದಲ್ಲಿಯ ಸಾಧಕರ ಬಳಲಿಕೆಯ ಬಣ್ಣನೆಯನ್ನು ಕಂಡರೆ ಅವರಲ್ಲಿಯ ಸಾಮ್ಯವು ನಿಚ್ಚಳವಾಗಿ ಹೊಳೆಯದಿರದು. ಅವರ ಗೋಳನ್ನು ಕೇಳಿ.

ಪ್ರಭುವೇ! ಭವಾಂಬುಧಿಯಲ್ಲಿ ಬಿದ್ದ ಪುರಾತನ ಪತಿತ ನಾನು. ಎನ್ನ ಮನ ಸದೈವ ವಿಷಯಕ್ಕೆ ಹರಿವುದು. ಈ ಕೋತಿ-ಮನವನ್ನು ಶಿಕ್ಷಿಸು. ಹಸಿವು-ತೃಷೆ-ನಿದ್ರೆಗಳೂ, ಮೋಹ, ಮದ, ಆಶೆಗಳೂ ನನ್ನಿಂದ ಅನಂತ ಅಪರಾಧಗಳನ್ನು ಮಾಡಿಸಿರುವವು. ಅದರ ಮೂಲಕ ನಿನಗೆ ಬಿನ್ನಹವನ್ನು ಮಾಡಲು ಕೂಡ ಬಾಯಿಲ್ಲದಂತೆ ಆಗಿರುವದು. ಆದರೂ ಪತಿತರನ್ನು ಉದ್ಧರಿಸುವುದು ನಿನ್ನ ಬಿರುದು ಇದ್ದಮೂಲಕ, ಪಾಪ-ದುಃಖಗಳನ್ನು ಪರಿಹರಿಸುವದು ನಿನ್ನ ಕೆಲಸವಿದ್ದಮೂಲಕ, ಮತ್ತು ಗಜೇಂದ್ರ, ಅಜಮಿಳ, ಧ್ರುವ ಇತ್ಯಾದಿ ಭಕ್ತರನ್ನು ಉದ್ಧರಿಸಿ ನೀನು ಇವನ್ನು ಸಿದ್ಧಪಡಿಸಿದಮೂಲಕ, ನಾನು ನಿನಗೆ ಶರಣು ಬಂದಿರುವೆ, ನಲಹುವಿಯಲ್ಲವೇ ಈ ಅನಾಥನನ್ನು!

ನೀನೇ ಉಪೇಕ್ಷೆಯ ಮಾಡಿದರೆ ಬೇರೆ ಗತಿ ಯಾರು ಎನಗೆ! ಜಪತಪ ಮಾಡಲು ನನ್ನಲ್ಲಿ ಜಾಣ್ಮೆಯಿಲ್ಲ. ದಾನಧರ್ಮಮಾಡಲು ಧನವಿಲ್ಲ. ಆದುದರಿಂದ ನೀನೇ ಗತಿಯೆಂದು ನಿನ್ನನ್ನು ಮೊರೆಹೊಕ್ಕಿರುವೆ. ಎಲ್ಲವನ್ನು ನಿನ್ನಧೀನ ಮಾಡಿರುವೆ. ಇನ್ನು ದಯ ಬಾರದೇ ಈ ದಾಸನ ಮೇಲೆ! ಒಲ್ಲೆನಯ್ಯ ನೀನಿತ್ತ ಇಹಸುಖವ! ಸಂಸಾರ ಸುಖವೆತ್ತ! ನಿಮ್ಮ ಸುಖವೆತ್ತ! ಕತ್ತಲೆ ಎತ್ತ! ಬೆಳಕೆತ್ತ! ಸಕ್ಕರೆಯನುಣಿಸಿ ಬೇವನುಣಿಸುವದು ಒಳಿತೇ! ನೀನೆ ಗತಿಯೆಂದು ನಂಬಿದವರೆದುರು ವಿಷಯಗಳನ್ನು ಒಡ್ಡಿ, ಅವರೊಡನೆ ಅಣಕವಾಡುವದು ಉಚಿತವೇ!

ನಾನು ನಿನ್ನನೆಯೆ ನಂಬಿರುವೆ. ಬಾಲ್ಯಯೌವನದಲ್ಲಿ ಆಟ-ನೋಟ-ಕೂಟಗಳಲ್ಲಿ ತೊಡಗಿದ ಮೂಲಕ ಬರಿದೇಹೋಯಿತು ಹೊತ್ತು. ಇನ್ನಾದರೂ ಮಾತೆ ಶಿಶುವನು ಕರೆದು ಮನ್ನಿಸುವ ತೆರನಂತೆ ಕರುಣಿಸು. ನಾನೀಗ ನಿನ್ನ ಪ್ರೇರಣೆಯಂತೆ ನಡೆವೆ-ನುಡಿವೆ. ಹೀಗಿರಲು ಎನ್ನಪರಾಧವೇನು? ಇನ್ನು ಎನ ಗುಣದೋಷಗಳನ್ನು ಎಣಿಸದಿರಯ್ಯ! ನಿನ್ನ ನಾಮಾಮೃತ ಸವಿದು

ಕುಣಿವಂತೆ ಕರುಣಿಸು. ಹಗಲು ನಾಲ್ಕು ಜಾವು ನಿಮ್ಮ ಕಳವಳದಲ್ಲಿ ಇರುವೆನು. ಇರುಳು ನಾಲ್ಕು ಜಾವು ನಿಮ್ಮ ವಿರಹಾವಸ್ಥೆಯಲ್ಲಿ ಇರುವೆನು. ಹಿಡಿವಡೆದ ಕುಂಜರ ತನ್ನ ವನವ ನೆನೆವಂತೆ– ಪಂಜರದಲ್ಲಿಯ ಗಿಳಿ ತನ್ನ ಕಾನನವ ನೆನೆವಂತೆ ನೆನೆವೆನಯ್ಯ ! ಚಕೋರವು ಚಂದ್ರಮನನ್ನು, ಅಂಬುಜವು ಭಾನುವನ್ನು, ಭ್ರಮರವು ಪರಿಮಳದ ಬಂಡನ್ನು ಚಿಂತಿಸುವಂತೆ, ನಾನು ನಿಮ್ಮನ್ನು ಚಿಂತಿಸುವೆ. ನವಿಲು ಗಿರಿಯಲ್ಲಿಯೆ ಆಡಬಯಸುವದು. ಹಂಸವು ಮಾನಸದಲ್ಲಿಯೆ ವಿಹರಿಸಬಯಸುವದು. ಕೋಗಿಲೆಯು ತಳಿತ ಮಾಮರದಲ್ಲಿಯೆ ಸ್ವರಗೈಯುವದು. ಅಲ್ಲವೇ ! ಅದೇಮೇರಿಗೆ ಎನ್ನ ಮನಸ್ಸು ನಿಮ್ಮನ್ನುಳಿದು ಅನ್ಯಕ್ಕೆ ಎಳೆಸದಂತಾಗಿದೆಯಯ್ಯ !

ಆದುದರಿಂದ ನಿನ್ನ ಪದಾಬ್ಜ ತೋರಿ, ಎನ್ನನ್ನು ಸದ್ಯೆವ ಪೊರೆಯಲು ಇದೇ ಸಮಯವಯ್ಯ. ನಾನು ನಿನಗೆ ಬೇಡುವುದು ಒಂದೆ ? ಎನ್ನ ಹೃದಯ ಕಮಲದಲ್ಲಿ ನಿರಂತರವಾಗಿ ನೆಲೆಸು! ಎನ್ನ ಕರಣಗಳೆಲ್ಲ ನಿನ್ನ ಸೇವೆಯಲ್ಲಿ ನಿರತವಾಗಲಿ ! ಮನವು ನಿನ್ನನ್ನೆ ನೆನೆಯಲಿ ! ಬುದ್ಧಿಯು ನಿನ್ನಲ್ಲಿಯೆ ಬೆರೆಯಲಿ. ಎಡಬಲ ನೋಡದೆ ನಿನ್ನ ಒಡಲನ್ನು ಸೇರಿರುವೆ. ನಿಜರೂಪವ ತೋರು. ಎನ್ನ ಚಿತ್ತದಲ್ಲಿ ನಿತ್ಯವಾಗಿರು. ಎನ್ನ ಹೃದಯದಿಂದ ನೀನು ಒಂದರಗಳಿಗೆ ಅಗಲಿದರೆ, ಎನಗೆ ನಿನ್ನ ಕುರುಹು ಒಂದು ಕ್ಷಣ ತೋರದಿದ್ದರೆ, ಎನ್ನ ತನು ವಿಕಲಿತವಾಗುವದು, ಎನ್ನ ಪ್ರಾಣ ನಿಲ್ಲದು. ಆದುದರಿಂದ ಎನ್ನ ಹೃದಯದಿಂದ ಎಂದೂ ಅಗಲದಂತೆ ಕರುಣಿಸಯ್ಯ !' ಇದೇ ಸುಮಾರಾಗಿ ಎಲ್ಲರ ಕಳವಳದ ಬೇಡಿಕೆ.

ಸಾಧಕರ ಕಳವಳವು ಸರ್ವ ಸಮರ್ಪಣದಲ್ಲಿ ಕೊನೆಗೊಳ್ಳುವದು. ಆತನು ತನ್ನ ತನುವನ್ನ ಮನವನ್ನ ಧನವನ್ನ ಪರಮಾತ್ಮನಿಗೆ ಅರ್ಪಿಸುವ. ಮನವನ್ನೂ ಬುದ್ಧಿಯನ್ನೂ ಆತನಲ್ಲಿರಿಸಿ ಸಾಧಕನು ಅನನ್ಯನಾಗುವ. ಭಗವಂತನ ಕೈಯಲ್ಲಿಯ ಸೂತ್ರದ ಬೊಂಬೆಯಂತೆ ಇರುವ. ಆತನ ಪ್ರೇರಣೆಯಂತೆಯೆ ಆಡುವ, ನಡೆವ, ನುಡಿವ. ಅಂಧನ ಕೈಯಲ್ಲಿ ಕೋಲಿತ್ತು ಕರೆದೊಯ್ವ ಮುಂದಾಡಿಯು ಆತನನ್ನು ಕೆಡಹಲು, ಅವನು ಬಿದ್ದರೆ ಅದು ಅಂಧನ ತಪ್ಪೊ, ಮುಂದಾಡಿಯ ತಪ್ಪೊ ? ಕಂದನನ್ನು ತಾಯಿಯು ಆಡಿಸುತ್ತಿರಲು ಆತನು ಬಾವಿಯಲ್ಲಿ ಬೀಳುತಿರೆ, ತಾಯಿಯು ಅವನನ್ನು ತೆಗೆಯ

ದಿದ್ದರೆ, ಅದು ಕಂದನ ತಪ್ಪೊ, ತಾಯಿಯ ತಪ್ಪೊ? ಹೇವನ್ನು ಒಪ್ಪಿಸಿದ ಮೇಲೆ ಸುಂಕವೇತರದಯ್ಯ? ಇನ್ನು ಹಾಲಲದ್ದು ನೀರಲದ್ದು! ನಿನಗೆ ಸರಿದೋರಿದ್ದನ್ನು ಮಾಡು. ಎಂಬ ಭಾವನೆಯಿಂದ ಭಕ್ತನು ಎಂಥ ಪರಿಸ್ಥಿತಿಯು ಒದಗಿದರೂ ನಿಶ್ಚಿಂತನಾಗಿರುವ.

ಕೊನೆಗೆ ಕಡಲಲ್ಲಿಯ ಬೊಬ್ಬುಳಿ ಕಡಲಲ್ಲಿ ಅಳಿಯುವಂತೆ, ಉರಿಯ ನುಂಡ ಕರ್ಪುರ ಉರಿಯನಪ್ಪುವಂತೆ, ಸಾಧಕನು ಭಗವಂತನಲ್ಲಿ ಅನನ್ಯನಾಗುವ. ಅವನ ಕಾಯ ಭಗವಂತನ ದೇವಾಲಯವಾಗುವದು; ಹೃದಯವು ಪೀಠವಾಗುವದು; ಸಮತೆ ಜಲ, ನಿತ್ಯತ್ವ ಅಕ್ಷತೆಯಾಗುವವು; ಸದ್ಗುಣ ಗಂಧ ಜ್ಞಾನ ಪುಷ್ಪ, ಭಕ್ತಿ ಬೋನ, ಮನ ಪೂಜಾರಿಯಾಗುವವು. ದೇಹದಂಡಿಗೆಗೆ ಶಿರದ ಸೋರೆಯ ಹಚ್ಚಿ, ನರಗಳ ತಂತಿಗಳ ಮೇಲೆ, ಬೆರಳಕಡ್ಡಿಗಳನ್ನು ಆಡಿಸಿ, ತನ್ನ ವೀಣೆಯೊಳಗಿಂದ ಮಧುರ ಸಂಗೀತವ ಹೊರಹೊಮ್ಮಿಸಲು ಆತನು ಭಗವಂತನನ್ನು ಬೇಡಿಕೊಳ್ಳುವ. ಮತ್ತು ಕೊನೆಗೆ ‘ ಎನ್ನ ಅಂತರಂಗ-ಬಹಿರಂಗ, ಅರವು-ಮರವು, ಭಕ್ತಿ-ಯುಕ್ತಿ, ಆಲಸ್ಯ-ಪರವಶ, ಎಲ್ಲವು ನೀವೆ!’ ಎಂದು ಅನಿಸುವದು ಸಾಧಕನಿಗೆ. ಈ ಸರ್ವ ಸಮರ್ಪಣ ಭಾವವೂ ಕೂಡ ಎಲ್ಲರಲ್ಲಿಯೂ ಒಂದೇ ಮಾದರಿಯದಿರುವದಿಲ್ಲವೇ?

ನಿಜವಾಗಿ ಅತೀಂದ್ರಿಯವಾದ ಸ್ವಾನುಭವ ಹೇಳಬಾರದು, ಎಂಬುದು ಎಲ್ಲ ಅನುಭಾವಿಗಳ ಮತ. ಹೇಳಬಾರದು ಎರಡರ್ಥದಲ್ಲಿ. ಅದು ಹೇಳಲು ಬಾರದಂತಹದು ಎಂಬದು ಒಂದು. ಅದನ್ನು ಹೇಳುವದು ಸರಿಯಲ್ಲ ಎಂಬುದು ಇನ್ನೊಂದು ಕೇಳಬಾರದವರಿಗೆ ಹೇಳಿದರೆ ಅನುಭವವು ಮರಳಿ ಬರುವದಿಲ್ಲ. ಆದರೂ ಅನುಭಾವಿಗಳೆಲ್ಲ ತಮ್ಮ ಅನುಭಾವದ ಅಂದವನ್ನು—ಅಲ್ಲಿಂದ ಕೆಳಗಿಳಿದಾಗ ಅದನ್ನು ನೆನೆದುಕೊಂಡು ಕೆಲಮಟ್ಟಿಗೆ ಅದರ ವರ್ಣನೆಯನ್ನು ನಮಗೆ ಸಲ್ಲಿಸಿರುವರು. ಆ ಬಣ್ಣನೆಯಲ್ಲಿಯೂ ಎನಿತು ಸಾಮ್ಯವಿದೆ ನೋಡಿ. ‘ ಗುರುಕರುಣದ ವಜ್ರಾಂಗಿಯನ್ನು ತೊಡಲು ಅಂತರಂಗದಲ್ಲಿ ಪ್ರಭುವು ಪ್ರಕಟವಾಗುವ, ವರಬಿಂದುವು ಕಾಣಿಸುವದು. ಮುತ್ತಿನ ಎಳೆಗಳು, ರತ್ನದ ಜಾಳಿಗೆಗಳು, ವಿದ್ರುಮದ ಬಳ್ಳಿಗಳು, ಮಿಂಚಿನ ಮಳೆಗಳು, ಬೆಳ್ಳಿ–ಹೊನ್ನಿನ ಹೂಗಳು, ಮಲ್ಲಿಗೆಯರಳುಗಳು, ಎಲ್ಲೆಲ್ಲಿಯೂ ಸುರಿಯುವವು. ದೀಪದ ಸಾಲುಗಳು ಬೆಳಗುವವು, ಸುವರ್ಣಜ್ಯೋತಿಯ ತಾರಕಗಳು ಒಳಹೊರಗೆ

ಒಂದಾಗಿ ಹೊಳೆಯುವವು. ಪಶ್ಚಿಮಗಿರಿಯಲ್ಲಿ ಚಿತ್ಸೂರ್ಯನುದಯಿಸಲು ಮುಚ್ಚಿದ ಕಮಲಗಳು ಅರಳಿ ಅಚ್ಚ ಹೊನಗಂಧವು ದೆಸೆದೆಸೆಗೆ ಎಸೆಯುವದು.

ಸೂರ್ಯನಿಲ್ಲದೆಯೆ ಕೋಟಿಸೂರ್ಯಪ್ರಭೆಯೂ, ಚಂದ್ರನಿಲ್ಲದೆಯೆ ಬೆಳದಿಂಗಳೂ, ಹೊಳೆಯುವವು. ಆ ನಿಜವ ನೋಡುವಾಗ ಜ್ಯೋತಿರ್ಲೋಕವ ಹೊಕ್ಕಂತೆ, ತಂಪಿನ ಜ್ಯೋತಿಯ ಮಧ್ಯದಲ್ಲಿ ನಿಂತಂತೆ ಆಗುವದು. ಎಲ್ಲೆಲ್ಲಿಯೂ ನೀಲಜ್ಯೋತಿಯೆ ಪಸರಿಸುವದು. ಸಾಂದ್ರವಾದ ಸುಖ ತುಂಬಿ ತುಳಕುವದು.

ಆಗ ಅನಾಹತ ನಾದವು ತನ್ನ ವಿವಿಧ ಬಗೆಗಳಿಂದ ಗೋಚರವಾಗಹತ್ತುವದು. ತಾಳ ಮೃದಂಗ-ಶಂಖಭೇರಿಗಳು ಮೊಳಗುವವು. ಕೋಗಿಲೆಯ ಗಾನವೂ, ವೀಣೆಯ ಮಂಜುಲ ರವವೂ, ಉನ್ಮನಿಯ ಓಂಕಾರನಾದವೂ, ಝೇಂಕಾರನಾದವೂ, ಗಂಭೀರವಾದ ಸಾಗರಘೋಷವೂ, ಸಾಧಕನನ್ನು ಮೈಮರೆಸುವವು. ಅಂಬರದಿಂದ ಸ್ವಹಿತ ಸುಖದ ಸುಧಾರಸವು ಸುರಿಯುವದು. ಶರೀರದಲ್ಲಿ ತುಂಬಿರುವ ಚಿದ್ರೂಪವು ಮೈದೋರುವದು. ತಿಳಿವೆ ಶರೀರ, ಬೆಳಗೆ ಮೈಯುಳ್ಳ ಆತ್ಮನು, ತಿಂಗಳ ಬೊಂಬೆಯಂತೆ, ಪಳಕಿನ ಪುತ್ತಳಿಯಂತೆ ಬೆಳಗುವನು. ಆತನಿಗೆ ನುಡಿಯಿಲ್ಲ-ನಡೆಯಿಲ್ಲ. ತನುವಿಲ್ಲ-ಮನವಿಲ್ಲ. ಕಡು ಸುಖದ ಸುಜ್ಞಾನಕಾಂತಿಯೆ ರೂಪತಾಳಿ, ಒಡಲು ತುಂಬಿರುವಂತೆ, ಆತ್ಮರೂಪವು ತೋರುವದು. ಅದನ್ನು ಕಂಡೊಡನೆ ಸರ್ವಾಂಗಗಳು ಜುಮ್ಮೆನ್ನುವವು; ಮೈಮೇಲೆ ಪುಲಕಗಳು ಏಳುವವು, ಕಂಗಳಲ್ಲಿ ಮುದಾಶ್ರುಗಳು ನಿಲ್ಲುವವು. ಉನ್ನತವಾದ ಸುಖವು ಒಳಗೆ ಉಮ್ಮಿ, ಸಾಧಕನು ಆನಂದದ ಕಡಲಲ್ಲಿ ತೇಂಕಾಡುವನು.

ಹರಿಕರುಣದ ಕೀಲಿಕೈಯಿಂದ ಬೀಗವನ್ನು ತೆಗೆದ ಕೂಡಲೆ ಅಂತರಂಗದ ಕದವು ಒಮ್ಮೆಲೆ ತೆರೆಯುವದು. ತತ್ವಚಿಂತನೆಯ ದೀಪವನ್ನು ಹಿಡಿದು ಸಾಧಕನು ಒಳಸೇರಲು, ಅಲ್ಲಿ ಆತನಿಗೆ ಒಂದು ಶೃಂಗಾರಸದನವು ಕಾಣುವದು. ಆ ಸೊಬಗಿನ ಅರಮನೆಯೊಳಗೆ, ಕೋಟಿರವಿಯಂತೆ ಮಿರುಗುವ ಮಂಟಪದಲ್ಲಿ ಸಚ್ಚಿದಾನಂದ ಭಗವಂತನು ರಮೆಯೊಡನೆ ನಗೆಮೊಗದಿ ಮಿನುಗುತಿರುವ, ಕಮಲಜಾದಿಗಳಿಂದ ಸ್ತುತಿಸಿಕೊಳ್ಳುತಿರುವ ಅದ್ಭುತರಮ್ಯ ನೋಟವು ಆತನ ಹೃದಯಕಮಲದಲ್ಲಿ ಕಂಗೊಳಿಸುವದು. ಇಷ್ಟೇ ಅಲ್ಲ ಸಾಧಕನಿಗೆ ಸಾಕ್ಷಾತ್

ವೈಕುಂಠ ದರ್ಶನವು ಕೂಡ ಆಗುವದು. ಅಲ್ಲಿಯ ವನ–ಉಪವನಗಳು, ಘನ ಸರೋವರಗಳು, ಕನಕ ಗೋಪುರಗಳು, ಪ್ರಜ್ವಲಿತ ಮಹಾದ್ವಾರಗಳು, ವಜ್ರ ವೈಡೂರ್ಯದ ತೊಲೆಗಳುಳ್ಳ ನಿರ್ಜರೋತ್ತಮರ ಮನೆಗಳು, ರಂಭೆ ಊರ್ವಸಿಯರ ಮೇಳಗಳೂ, ನಾರದ ತುಂಬರಾದಿ ಭಾಗವತರ ಸಮ್ಮೇಳಗಳೂ–ಬ್ರಹ್ಮ–ವಿಷ್ಣು–ಮಹೇಶರೂ— ಇವೆಲ್ಲ ಕಾಣುವವು. ಮತ್ತು ಸಾಧಕನು ಪರಮಾನಂದ ಭರಿತನಾಗಿ ಮೈಮರೆಯುವನು.

ಕೊನೆಗೆ ಜೋತಿ ಮುಟ್ಟಿದ ಬತ್ತಿ ಜ್ಯೋತಿರ್ಮಯವಾಗುವಂತೆ, ಸಾಗರ ಮುಟ್ಟಿದ ನದಿಗಳು ಸಾಗರ ರೂಪವಾಗುವಂತೆ, ದೇವರನ್ನು ಮುಟ್ಟಿದವರೆಲ್ಲ ದೇವರೂಪವಾಗುವರು. ಚಿತ್ತು ಚಿದ್ಘನವ ಬೆರೆಯುವದು. ಆದುದರಿಂದ ತುಂಬಿಯು ಪರಿಮಳ ಉಂಡುದೋ, ಪರಿಮಳವು ತುಂಬಿಯನುಂಡುದೋ, ಹೇಳಲಾರದಂತೆ, ಲಿಂಗ ಪ್ರಾಣವಾಯಿತೋ, ಪ್ರಾಣ ಲಿಂಗವಾಯಿತೋ ಹೇಳಬರುವದಿಲ್ಲ. ಮತ್ತು ಸಾಧಕನು ಆಡಬಾರದ, ನೋಡಬಾರದ, ಹಿಡಿಯಬಾರದ ಬಯಲಲ್ಲಿ ಬೆರತು ನಿರಬಯಲಾಗುವನು.

ಇಂಥ ಅನುಭಾವಿಗಳ ದಿವ್ಯ ಜೀವನವು ನಿಜವಾಗಿ ಅವರ್ಣನೀಯವು. ಪರಮಾತ್ಮನಲ್ಲಿ ಸಾಮರಸ್ಯವನ್ನು ಪಡೆದ ಈ ಮಹಾತ್ಮರು ಆತನ ವೈಭವದಿಂದ ಮೆರೆಯುವದರಲ್ಲಿ ಏನಾಶ್ಚರ್ಯ? ಅಣುರೇಣು–ತೃಣಕಾಷ್ಟದಲ್ಲಿ ಅವರು ಶಿವನನ್ನು ಕಾಣುವರು. ಮೋಡದೊಳಡಗಿದ್ದ ಸೂರ್ಯನಂತೆ, ನೀರಿಗಂಟದ ತಾವರೆಯಂತೆ, ಕೆಸರಿನಲ್ಲಿ ನೆಲೆಸಿರುವ ಕುಂಡಲಿಗನ ಕೀಟದಂತೆ, ಕೊಡದಲ್ಲಿ ಕೂಡಿರುವ ಬಯಲಿನಂತೆ, ತನುವಿನಲ್ಲಿ ಬೆರೆತಿರುವ ಪರಮಾತ್ಮನಂತೆ, ಇವರು ಸಂಸಾರವ ಸಾಗಿಸುವರು. ಈ ಸುಜ್ಞಾನಿಗಳು ಜಗದೊಳಗೆ ಸುಮ್ಮನಿರುವರು. ಮರೆತಂತೆ ತೋರುವರು, ಆದರೆ ಎಲ್ಲವನ್ನು ಅರಿತು ಇರುವರು. ಎಲ್ಲರೊಳು ತಾವಾಗಿ, ಎಲ್ಲ ತಮ್ಮೊಳಗಾಗಿ, ಬೆಲ್ಲ ಸವಿದ ಮೂಕರಂ ತಿರುವರು. ಬಲ್ಲತನವ ನೀಗುವರು, ಆದರೆ ಬಲ್ಲರೇ ತಾವಾಗುವರು. ಎಲ್ಲವನು ತಿಳಕೊಂಡು, ಏನನ್ನೂ ಹೇಳದಲೆ ಇವರು ದೇಹವಿದೇಹದಲಿ ಇರುವರು.

ಇವರ ವ್ಯಾಪಾರಗಳೆಲ್ಲ ಹರಿಪ್ರೇರಿತ. ಹರಿಯು ನುಡಿಸಿದಂತೆ ನುಡಿವರು, ನಡಿಸಿದಂತೆ ನಡೆವರು. ಹರಿಗೆ ಉಣಿಸಿದೊಲು ಉಣುವರು, ಉಡಿಸಿದೊಲು ಉಡುವರು. ಹರಿಯು ತಿಳಿಸಿದ ಹಾಗೆ ತಿಳಿವರು, ಸುಳಿಸಿದ ಹಾಗೆ

ಸುಳಿವರು. ಜಗದ ಆಟವೆಲ್ಲ ಇವರಿಗೆ ಜಡವಾಗಿ ಕಾಣುವದು. ಲೋಕವೆಲ್ಲ ಇವರಿಗೆ ಹುಚ್ಚನಂತಿಹುದು; ಇವರು ಲೋಕಕ್ಕೆ ಹುಚ್ಚರಂತೆ ಕಾಣುವರು. ಇವರು ಒಮ್ಮೆ ಆತ್ಮನ ಏಕಾಂತವ ಬಯಸುವರು, ಒಮ್ಮೆ ಲೋಕಾಂತದಲ್ಲಿ ನಿಲ್ಲುವರು. ತಮ್ಮ ತಾವು ಈಕ್ಷಿಸಿ, ತಮ್ಮ ಸುಖವನುಂಡು, ತಮ್ಮೊಳು ತಾವು ಉಬ್ಬಿ ನಗುತಲಿರುವರು. ಒಮ್ಮೊಮ್ಮೆ ಭಕ್ತರರಿದು ಬೋಧಿಸುವರು. ಕೇಳುವವರಿದ್ದರೆ ಹೇಳುವರು. ಆದರೆ ಅವರು ಕೇಳಿದರೆ ಇವರಿಗೆ ಆನಂದವಿಲ್ಲ, ಹೇಳದಿದ್ದರೆ ನೋವಿಲ್ಲ. ಮಗುಗಳು ಗಾಳಿಪಟವನ್ನು ಆಡಿಸಿ, ಸಾಕಾದಾಗ ಅದನ್ನು ಸುರುಳುವಂತೆ, ಇವರು ತಮ್ಮ ಚಿತ್ತವನ್ನು ಒಮ್ಮೆ ಹೊರಗೆ ಆಡಿಸುವರು, ಒಮ್ಮೆ ಅದನ್ನು ಆತ್ಮನೊಳಗೆ ಇರಿಸುವರು. ಈಮೇರೆಗೆ ಇವರು ಹರಣವಿದ್ದು ಹರಣವಿಲ್ಲದಂತಹರು, ಮನವಿದ್ದು ಮನವಿಲ್ಲದಂತಹರು. ಜೀವವಿದ್ದು ಜೀವವಿಲ್ಲದಂತಹರು. ಉಂಡುಪವಾಸಿಗಳು, ಬಳಸಿ ಬ್ರಹ್ಮಚಾರಿಗಳು, ಭೂಮಂಡಲವಿದ್ದು ನಿಃಸಂಗರು.

ಪರಬ್ರಹ್ಮ ವಿಷ್ಣು ಆದರೆ, ಚರಬ್ರಹ್ಮ ವೈಷ್ಣವರು. ಅವರು ಪರಿಪೂರ್ಣರು. ಶ್ರೀಯಧೇನುವನ್ನು ಆಶ್ರಯಿಸಿದವರಿಗೆ ಕೊರತೆಯುಂಟೆ? ಸುರತರುವಿನ ಬಳಿಯಲ್ಲಿದ್ದವರಿಗೆ ಕಳವಳವುಂಟೇ? ಸುರನದಿಯಲ್ಲಿರುವವರಿಗೆ ದೋಷವುಂಟೇ? ರವಿಯ ಪ್ರಭೆಯಲ್ಲಿದ್ದವರಿಗೆ ಕತ್ತಲುಂಟೇ? ಅದೇ ಮೇರೆಗೆ ಹರಿಯ ದಾಸರಿಗೆ ಭವಭಯವುಂಟೇ? ಇಂಥ ವೈಷ್ಣವರು ನಿಜವಾಗಿ ನರರಲ್ಲ! ಅವರು ಸುರರಿಗಧಿಕರು. ಕ್ಷೀರ ಕೂಡಿದ ಜಲಕ್ಕೆ ನೀರೆನ್ನಬಹುದೇ? ನೀರಿನಲ್ಲಿ ಉದಿಸಿದ ಮುತ್ತು ನೀರಾಗಬಹುದೆ! ಆರಿದ ಭಾಂಡ ಮಣ್ಣಾಗಬಹುದೇ! ನಾಮಧಾರಕರಾದ ಹರಿದಾಸರನ್ನು ನರರೆನ್ನಬಹುದೆ? ಹಾಗೆಂದವರಿಗೆ ರೌರವ ನರಕ ತಪ್ಪದು.

ಈ ಪರಮಹಂಸರು ಮೂಲವನ್ನು ತಿಳಿವರು. ಮಾಯೆಯನ್ನು ಕಳೆವರು. ನೀರನುಳಿದು, ರಾಜಹಂಸವು ಕ್ಷೀರವ ಸವಿವಂತೆ, ಇವರು ಮೂರು ದೇಹವ ನುಳಿದು, ಒಳಗೆ ಹೊಳೆಯುವ ತತ್ವಸಾರವ ಸವಿವರು. ಬ್ರಹ್ಮಪುರದಲ್ಲಿರುವ ಅಮೃತದ–ಕೊಳದಲ್ಲಿ ಮುಳುಗಿ, ಪರಮಾಮೃತವನು ಉಣ್ಣುವರು. ಪಾಪಪುಣ್ಯವೆಂಬ ಕಮಲಗಳನ್ನು ನುಂಗುತ್ತ ಸ್ಫುರಿತ ಜ್ಞಾನವೆಂಬ ಬನದಲ್ಲಿ, ಪರಮ ಸುಖದಿಂದ ಚರಿಸುವರು. ಪೂರ್ಣ ಬ್ರಹ್ಮನಲ್ಲಿ ಆಡಿ, ಪೂರ್ಣ–ಬೋಧ ಜೀರ್ಣ

ಮಾಡಿ (ಪಚನ ಮಾಡಿ) ಅನ್ನ ಅಮೃತವಾಗಿ, ಬ್ರಹ್ಮಾನಂದದಲ್ಲಿ ನಲಿಯುವರು. ಸರ್ವಸಾಕ್ಷಿಯಾದ ಸೂರ್ಯನಂತೆ ಧರೆಯಲ್ಲಿ ಮೆರೆವರು. ಪರಮ ಮಂಗಲವಾದ ಶಾಂತಿಸ್ನಾನವ ಮಾಡಿ, ವಿರತಿ ಭಸ್ಮವ ಧರಿಸಿ, ಭಗವಂತನ ಕರುಣ ಕರಗಳಿಂದ ಭಕ್ತಿಯ ಭಿಕ್ಷೆಯನ್ನು ಸೇವಿಸುತ್ತ, ತತ್ವವೆಂಬ ದೇಶದಲ್ಲಿ ಅತ್ತಿತ್ತ ಅಲೆದಾಡಿ, ತಮ್ಮ ಇಪ್ಪತ್ತೊಂದು ಕುಲಗಳನ್ನು ಪಾವನಮಾಡುವರು. ಕೊನೆಗೆ ಕ್ಷೀರ ಕ್ಷೀರವ ಸೇರುವಂತೆ ಇವರು ಕೈವಲ್ಯವ ಪಡೆಯುವರು.

ಅಚಲಚಿತ್ತರಾದ ಈ ಮಹನೀಯರಿಗೆ ಹಿರಿದು ಕಿರಿದೆಂಬ ಭೇದವಿರುವದಿಲ್ಲ. ತುಂಬಿದುದು ತುಳಕದಂತೆ. ನಂಬಿದವರು ಸಂದೇಹಿಸದಂತೆ, ನೆರೆದವರು ಮರೆಯದಂತೆ, ಘನವ ಬೆರೆವ ಈ ಮಹಾತ್ಮರ ಇರವು. ಇವರು ಮಲರಹಿತರು–ನಿರ್ಮಲರು. ಉರಿಯುಂಡ ಕರ್ಪೂರಕ್ಕೆ ಕರಿಯೆಲ್ಲಿಯದು? ಬಯಲ ಮರೀಚಿಗೆ ಕೆಸರೆಲ್ಲಿಯದು? ವಾಯುವನಪ್ಪಿದ ಪರಿಮಳಕ್ಕೆ ನಿರ್ಮಾಲ್ಯವೆಲ್ಲಿಯದು? ಪರಮಾತ್ಮನೇ ಒಲಿದ ಮೇಲೆ ಇವರಿಗೆ ಭವಬಾಧೆಯೆಲ್ಲಿಯದು? ಇವರು ನಿತ್ಯತೃಪ್ತರು. ಯಾಕಂದರೆ, ಅಮೃತಕ್ಕೆ ಹಸಿವುಂಟೇ? ಜಲಕ್ಕೆ ತೃಷೆಯುಂಟೆ? ಘನಪುರುಷರಿಗೆ ವಿಷಯವುಂಟೇ? ಅದೇ ಮೇರೆಗೆ ಈ ಮಹಾಶರಣರಿಗೆ ಮುಕ್ತಿಯ ಬಯಕೆಯೂ ಕೂಡ ಇರುವದಿಲ್ಲ. ಪೂರ್ಣ ಸಮಾಧಾನವು ಇವರ ಸಹಜ ಸ್ವಭಾವವಿದ್ದಂತೆ, ಭೂತದಯೆಯು ಇವರ ಸಹಜಗುಣ; ಭೂತಹಿತವು ಇವರ ಸಹಜ ಕರ್ಮ; ಸರ್ವಭೂತರತಿಯು ಇವರ ಸಹಜ ಧರ್ಮ. ಕಾಮಧೇನುವಿನಲ್ಲಿಯೆ ಕಲ್ಪಿಸಿದ ಸವಿಯು ಸಿಗುವಂತೆ, ಮಹಾಶೇಷನಲ್ಲಿಯೇ ಮಾಣಿಕ್ಯವು ದೊರೆಯುವಂತೆ, ವಾರಣದ ಕುಂಭದಲ್ಲಿಯೇ ಮೌಕ್ತಿಕವು ಲಭಿಸುವಂತೆ, ಇಂಥ ಶರಣವರರ ಮನೋಮಧ್ಯದಲ್ಲಿಯೇ ದೇವರು ಇರುವ; ಅವರ ಜಿಹ್ವೆಯಲ್ಲಿಯೆ ವಚನದ ಪರಮಾಮೃತವು ನೆಲೆಸಿರುವದು. ಅದನ್ನುಂಡು ಎಲ್ಲರೂ ಅಮರಜೀವಿಗಳಾಗಲು ಯತ್ನಿಸಬೇಕು.

(೪)

ಇದು ನಮ್ಮ ಹಿರಿಯರ ದಿವ್ಯ ಜೀವನದ ಆದರ್ಶ. ಇಲ್ಲಿ ಬರೆಯಲಾದ ಚಿತ್ರವು ಒಂದು ಸಮ್ಮಿಲಿತ ಚಿತ್ರ (Composite picture). ಅದರಲ್ಲಿ ನಮ್ಮ ನಾಡಿನಲ್ಲಿಯ ವಿವಿಧ ಮತ–ಪಂಗಡಗಳಿಗೆ ಸೇರಿದ ಮಹಾ ಪುರುಷರ

ಜೀವನದಲ್ಲಿಯ ಅಂಗಗಳ ಅಂಶಗಳು ಒಟ್ಟುಗೂಡಿಸಲಾಗಿವೆ. ಇವು ಅಂತ ರಂಗದಲ್ಲಿ ಪ್ರತಿಬಿಂಬಿತವಾಗಿ, ಒಂದು ವಿಶೇಷವಾದ ರೂಪವನ್ನು ತಾಳಿ, ಹೊರಹೊಮ್ಮಿವೆ. ಒಂದು ದಿವ್ಯ ಭವ್ಯ ಆಕಾರವನ್ನು ತಾಳಿವೆ. ಮೇಲಿನ ಶಬ್ದ ಚಿತ್ರದಲ್ಲಿ ಮೂಡಿವೆ.

ಇಂಥ ಅದ್ಭುತ ಜೀವನವೇ ನಿಜವಾದ ಶಾಂತಿಯ ಸೆಲೆ–ವೈಭವದ ನೆಲೆ ಯಲ್ಲವೇ? ಅದನ್ನುಳಿದು ಇನ್ನಾವುದು ಜಗತ್ತಿಗೆ ಮೇಲ್ಕಾಣಿಸಿದ ಮಹಾ ವರಗಳನ್ನು ಸಲ್ಲಿಸಬಲ್ಲದು? ಇಂದು ಇಡೀ ವಿಶ್ವಕ್ಕೆಯೆ ವ್ಯಕ್ತಿನಿಷ್ಠೆಯ–ವ್ಯಕ್ತಿ ಗೌರವದ ರೋಗವಾಗಿದೆ. ನೀಚಸ್ವಾರ್ಥದ ಚಂಡ ತಾಂಡವವೂ, ಭೋಗ ಲಾಲನೆಯ ಭೀಕರ ಬಿರುಗಾಳಿಯೂ ಇಂದು ವಿಶ್ವದಲ್ಲಿ ಪ್ರಲಯ ಕೋಲಾ ಹಲವನ್ನು ಎಬ್ಬಿಸಿದೆ. ಇವುಗಳ ಹಿಡಿತವು ಸಡಿಲಾಗದೆ, ಅದರಿಂದ ವಿಶ್ವದ ಬಿಡುಗಡೆಯಾಗದೆ, ಅದು ನಾಲ್ಕು ದಿನ ಬಾಳುವ ಬಗೆ ಹೇಗೆ? ಭೋಗರೋಗ ದಿಂದ ಕ್ಷೀಣವಾದ ಮಾನವ್ಯಕ್ಕೆ, ಇಂದು ತ್ಯಾಗ ಯೋಗಗಳ ಮದ್ದು ಬೇಕಾಗಿದೆ. ಮಾನವ ಸಂಸ್ಕೃತಿಗೆ ಇಂದು ಪರಮಾರ್ಥದ ಜೀವಸತ್ವವು (Spiritual Vitamin) ಬೇಕಾಗಿದೆ. ಅದು ಇಲ್ಲದ ಮೂಲಕವೆ ಎಲ್ಲ ಸಂಸ್ಕೃತಿಗಳು ಹಿಂದೆ ಬದುಕಲಿಲ್ಲ–ಮುಂದೆ ಬದುಕುವಂತಿಲ್ಲ. (A culture dies for want of Spiritual Vitamin)

ಪರಮಾರ್ಥದ ಗುರಿಯೆಡೆಗೆ ಸಾಗಿದ, ಸಮಾಜದ ನಿರಂತರವಾದ ಸಚೇತನ ಗತಿಯೆ ನಾಗರಿಕತೆಯ ಜೀವಾಳ. ಸತ್ಪುರುಷರ ದಿವ್ಯ ಜೀವನದಲ್ಲಿ ವ್ಯಕ್ತವಾದ ಆತ್ಮದರ್ಶನವೇ ಅದರ ಕೊನೆಯ ಅಂತಿಮ. ತನ್ನ ಮೂಲ ಪರಮಾರ್ಥದ ಸ್ಫೂರ್ತಿಯನ್ನು ಕಾಯ್ದುಕೊಳ್ಳ ಬಲ್ಲ— ಅವಶ್ಯವಿದ್ದಾಗ ಅದ ರಲ್ಲಿಯೆ ಸತ್ತತ್ವಗಳ ಆಳ–ಅಗಲ–ಎತ್ತರಗಳನ್ನು ವಿಸ್ತರಿಸಬಲ್ಲ–ನಾಗರಿಕತೆಯೆ ಎಲ್ಲ ಆಘಾತಗಳನ್ನು ತಡೆದು–ತೊಡೆದು ಬಾಳಲು ಸಮರ್ಥವಾಗುತ್ತದೆ. ಹಾಗೆ ಮಾಡಲರಿಯದುದು ಸಾಯುವದು ಖಂಡಿತ.

ಇನ್ನು ಮಾನವ್ಯದ ಆಧ್ಯಾತ್ಮಿಕ ವಿಕಸನವು ಆಗುವದೆಂತು? ಜನ ಸಾಮಾನ್ಯರ ಸಾಂಸ್ಕೃತಿಕ ಮಟ್ಟವನ್ನು ಮೇಲಕ್ಕೆ ಎತ್ತುವದೆಂತು? ಈ ಕಾರ್ಯವನ್ನು ಆಯಾ ಸಮಾಜದಲ್ಲಿಯ ಆಧ್ಯಾತ್ಮಿಕ ಪೂರ್ಣತೆಯನ್ನು ಪಡೆದ ಮಹಾತ್ಮರೇ ನೆರವೇರಿಸಬಲ್ಲರು. ಅವರೇ ನಿಜವಾದ ಮಾರ್ಗದರ್ಶಕರು,

ಮಾರ್ಗನಿರ್ಮಾತರು. ಅವರೇ ಸಮಾಜದ ಮುಂದಾಳುಗಳಾದಬೇಕು. ಅವರ ಜೀವನದ ಆದರ್ಶವೇ ಸಾಮಾಜಿಕರೆದುರು ಸದೈವ ಬೆಳಗುತ್ತಿರಬೇಕು. ಇದಕ್ಕೆ ಸರಿಯಾದ ಧರ್ಮಶಿಕ್ಷಣವು ಅತ್ಯಗತ್ಯ. ಮಾನವನ ಮೈಯ ಬೆಳವಣಿಗೆಗೆ ಅನ್ನ-ಅಂಗಸಾಧನಗಳೂ, ಮನಸ್ಸಿನ ಬೆಳವಣಿಗೆಗೆ ಅಭ್ಯಾಸ-ಪ್ರಚೋದನಗಳೂ, ಭಾವವಿಕಸನಕ್ಕೆ ಸಾಹಿತ್ಯ-ಸಂಗೀತಕಲೆಗಳೂ, ಸಂಕಲ್ಪ ಶಕ್ತಿಯ ವಿಕಾಸಕ್ಕೆ ಸಂಯಮ ಸದಾಚಾರಗಳು ಬೇಕಾಗುವಂತೆ, ಅವನ ಚೈತನ್ಯದ ಬೆಳವಣಿಗೆಗೆ ಧರ್ಮಶಿಕ್ಷಣದ ನೆರವು ಅವಶ್ಯ ಬೇಕು. ಮಹಾ ಪುರುಷರ ಆದರ್ಶವು-ಧರ್ಮಶಿಕ್ಷಣದ ಜೀವಾಳ. ಮಾನವನ ಈ ಎಲ್ಲ ಅಂಗಗಳ ವಿಕಸನಕ್ಕೆ ಅನುಕೂಲತೆಗಳನ್ನು ಕಲ್ಪಿಸದ ಯಾವ ಶಿಕ್ಷಣಕ್ರಮವೂ ಪೂರ್ಣವೆನಿಸಲಾರದು. ಮಾನವನು ಧರ್ಮವಿರಹಿತನಾಗಿ ಬಾಳಲರಿಯನು. ಈ ಧರ್ಮವೃತ್ತಿಯನ್ನು ಬೆಳೆಯಿಸಲು ಏರ್ಪಾಡು ಇಲ್ಲದ ಶಿಕ್ಷಣವು, ಆಧ್ಯಾತ್ಮಿಕ ಅಪೂರ್ಣತೆಯಿಂದಲೂ, ದೌರ್ಬಲ್ಯದಿಂದಲೂ ಕೂಡಿದ ಮಾನವ ಪ್ರಾಣಿಗಳನ್ನು ಜನಿಸುವದು. ಬರಿ ನೀತಿಶಿಕ್ಷಣದಿಂದ ಈ ಕೆಲಸವು ಆಗಲರಿಯದು. ಯಾಕಂದರೆ ಓರ್ವ ಮಹನೀಯರು ಉಸುರಿದ ಮೇರೆಗೆ— 'To impart moral principles without religious basis is to extract oil out of sand' ಧರ್ಮದ ತಳಹದಿಯಿಲ್ಲದ ನೈತಿಕ ತತ್ವಗಳನ್ನು ಕಲಿಸುವದು, ಮಳಲಿನಿಂದ ಎಣ್ಣೆಯನ್ನು ತೆಗೆದಂತೆ. ಅಸಾಧ್ಯ ಮಾತು,—ಅಶಕ್ಯ ಸಂಗತಿ. ಧರ್ಮವನ್ನು ಅಲ್ಲಗಳೆಯುವ ಮಹನೀಯರು ಇದನ್ನು ಚನ್ನಾಗಿ ಗಮನಿಸಬೇಕು.

ಧರ್ಮದ ಪ್ರಧಾನ ಅಂಗಗಳು ಮೂರು.—ತತ್ವಜ್ಞಾನ, ನೀತಿ ಮತ್ತು ಅನುಭಾವ. ಈ ಮೂರರೊಳಗೆ ತತ್ವಜ್ಞಾನದಲ್ಲಿ ಸಮನ್ವಯವಾಗುವದು ಅಷ್ಟೊಂದು ಸುಲಭ ಸಾಧ್ಯವಿಲ್ಲ. ಅದೊಂದು ಬುದ್ಧಿಯ ಕಸರತ್ತು, ತರ್ಕ-ಟಗರಗಳ ಕಾದಾಟ.—ಇರಿದಾಟ. ಅದಕ್ಕೆ ಕೊನೆಯಿಲ್ಲ. ಈ ಮತಿಮಂಥನದ ತಿರುಳು ಇಷ್ಟು. ಒಂದು ಅದ್ಭುತವಾದ ಶಕ್ತಿಯು ಈ ಜಗತ್ತಿಗೆ ಆಧಾರವಾಗಿ ನೆಲೆಸಿರುವದು. ಅದಕ್ಕೆ ಸಾವಿರ ಹೆಸರುಗಳು; ಅದರ ಕರುಣವನ್ನು ಪಡೆಯುವದು ಮಾನವನ ಆದ್ಯ ಕರ್ತವ್ಯ. ಇದಕ್ಕೂ ಮುಂದೆ ಸಾರಿದೆವೆಂದರೆ ನಾವು ಮತಭಿನ್ನತೆಯ—ಕಲಹದ ಪ್ರಾಂಗಣವನ್ನು ಪ್ರವೇಶಿಸುವೆವು. ಧರ್ಮದ

ಇನ್ನುಳಿದ ಅಂಗಗಳಾದ ನೀತಿ ಅನುಭಾವಗಳು ಸಮನ್ವಯಕ್ಕೆ ಹೆಚ್ಚು ಅನು ಕೂಲವಾದವುಗಳು. ನಾವು ಇವುಗಳ ಮಹತ್ವವನ್ನು ಮರೆತು ತರ್ಕದ ತಗರುಗಳೂ, ದಂಭದ ಬೊಂಬೆಗಳೂ, ಮತ್ಸರದ ಮಂಗಗಳೂ, ಮಾತಿನ ಮಲ್ಲರೂ ಆದದಂದಿನಿಂದ ನಮ್ಮಲ್ಲಿಯ ಹಿರಿತನ–ಚೈತನ್ಯ–ಸಾಮರ್ಥ್ಯ–ವೈಭವ ಗಳೆಲ್ಲ ಮರೆಯಾದವು. ಒಮ್ಮನವು ಇಮ್ಮನವಾಯಿತು. ಒಕ್ಕಟ್ಟು ಒಡೆ ಯಿತು. ಬಿಕ್ಕಟ್ಟು ಬೆಳೆಯಿತು. ಈ ವಿಷಮತೆಯನ್ನು ಅಳ್ಳಗಳೆಯಲು ನಾವು ಮರಳಿ ಅನುಭಾವ–ನೀತಿಗಳಿಗೆಯೆ ಶರಣು ಹೋಗಬೇಕು. ಸಕ್ಕರೆಯು ಎಲ್ಲ ರಿಗೂ ಸಮನಾಗಿಯೆ ಸವಿಯಾಗಿರುವಂತೆ, ಅನುಭಾವಪಥವು ಎಲ್ಲರಿಗೂ ಒಂದೆ ಬಗೆಯಾಗಿ ಆನಂದದಾಯಕವಿರುವದು.

ಈ ಅನುಭಾವದ ಅಡಿಗಲ್ಲಾದ ಭಕ್ತಿಯಲ್ಲಂತೂ ಒಲವಿಗೆ ತುಂಬ ಪ್ರಾಧಾನ್ಯ. ಪರಮಾತ್ಮನಲ್ಲಿಯ ಮಿಗಿಲಾದ ಪ್ರೀತಿಯೆ ಭಕ್ತಿಯು. 'ಸಾ ಪರಾನುಶಕ್ತಿರೀಶ್ವರೇ' ಭಕ್ತಿಯ ಮುಕ್ತಿಯ ಜನನಿ. ಪ್ರೀತಿಯು ಎಲ್ಲ ಮಾನವರ ಸಹಜಧರ್ಮ! ಆದುದರಿಂದ ಭಕ್ತಿಯು ಎಲ್ಲರಿಗೆ ಸಾಮಾನ್ಯ ವಾದ ಸುಲಭ ಕರ್ಮ! ನಮ್ಮನಾಡು ಭಕ್ತಿಯ ನೆಲವೀಡು. ಭಕ್ತಿಯು ದ್ರಾವಿಡರಲ್ಲಿ ಮೊಳೆತರೂ ಬೆಳೆದುದು ಇಲ್ಲಿಯೆ. ಎಲ್ಲರಿಗೆ ಸಹಜ ಸುಲಭ ವಾದ ಈ ಭಕ್ತಿಯ ಸಮಾನ ಭೂಮಿಕೆಯ ಮೇಲೆ ನಿಂತು, ಪರಮತ–ಅಸಹ ನೆಯನ್ನು ತೊರೆದು— ಬ್ರಹ್ಮ–ವಿಷ್ಣು–ಮಹೇಶ–ರಾಮ–ಕೃಷ್ಣ–ಶಿವ–ಶಂಕರ– ಜಿನ– ಇತ್ಯಾದಿ ವಿವಿಧ ನಾಮರೂಪಗಳಿಂದ ಮೆರೆಯುವ ಪರಮಾತ್ಮನನ್ನು ಪಡೆಯಲು ಕನ್ನಡಿಗರೆಲ್ಲ ಹೆಣಗಬೇಕು. ಆತನ ಅನುಭಾವವನ್ನು ಪಡೆಯ ಬೇಕು. ಇಂಥ ಹಿರಿ ಅನುಭಾವಿಗಳಿಂದ ಕೂಡಿದ ಕನ್ನಡ ಕುಲವು, ಭಾರತ ಕುಲಕ್ಕೆ ಉಜ್ವಲ ಮೇಲ್ಪಂಕ್ತಿಯನ್ನು ತೋರಿಸಬೇಕು. ಅಂದರೆ ಇಡಿ ಭಾರ ತವು ಪಾವನತೆಯ ಗುಡಿಯಾಗಿ, ಮರಳಿ ಐಹಿಕ ಪಾರಮಾರ್ಥಿಕ ವೈಭವದ ಮುಡಿಯನ್ನು ಮುಟ್ಟಬಹುದು. ಇಡಿ ವಿಶ್ವದಲ್ಲಿ ಭಕ್ತಿ-ಶಾಂತಿ-ಸೌಹಾರ್ದಗಳ ದಿವ್ಯ ಧ್ವಜವನ್ನು ಮೆರೆಯಿಸಬಹುದು.

ಈ ಮಹಾಕಾರ್ಯವನ್ನು ನೆರವೇರಿಸುವ ಸಾಮರ್ಥ್ಯವು ಕನ್ನಡಕುಲ ದಲ್ಲಿ ಜನಿಸಬೇಕಾದರೆ ಇದೇ ಹೇಳಿದ ಮೇರೆಗೆ ನಮ್ಮಲ್ಲಿ ಕನಕ-ಪುರಂದರರಂಥ ದಾಸವರೇಣ್ಯರೂ, ಪ್ರಭುದೇವ–ಬಸವರಂಥ ಶರಣವರರೂ, ಭರತೇಶ–ರತ್ನಾ

ಕರರಂಥ ಅಧ್ಯಾತ್ಮ-ಭಾನುಗಳೂ ಹುಟ್ಟಬೇಕು. ಕನ್ನಡಮ್ಮನು ಇಂಥ ವರ ಪುತ್ರರ ಬರವನ್ನು ಕಾಯುತ್ತಿರುವಳು. ಅವರ ಬರವಿಗಾಗಿಯೆ ನಮ್ಮ 'ಸುಮನಾಂಜಲಿ'ಯು ಆ ಪ್ರಭುವಿನ ಶ್ರೀಚರಣಗಳಲ್ಲಿ ಅರ್ಪಿಸಲಾಗಿದೆ.

ಇದೊಂದು ಧರ್ಮಶಿಕ್ಷಣದ ಕಿರಿದಾದ-ಹಿರಿದಾದ ಕೈಪಿಡಿ. ಗಾತ್ರ ಕಿರಿದು, ಗುಣ-ಚೇತನ ಹಿರಿದು. ಇದರಲ್ಲಿಯ ಹಿರಿಯರ ಮಾತು ಜ್ಯೋತಿರ್ಲಿಂಗ, ನುಡಿಗಳು ಸ್ಫೂರ್ತಿಯ ಕಿಡಿಗಳು. ಅವು ಅಂತರಂಗದಲ್ಲಿಯ ಕತ್ತಲನ್ನು-ಅಜ್ಞಾನ-ನೈರಾಶ್ಯಗಳನ್ನು-ಕಳೆಯ ಬಲ್ಲವು; ಸುಪ್ತ ಸದ್ಭಾವನೆಗಳನ್ನು ಎಚ್ಚರಿಸಬಲ್ಲವು; ನವ ಚೈತನ್ಯ-ಉತ್ಸಾಹಗಳನ್ನು ಬೀರಬಲ್ಲವು. ಜನತೆಯನ್ನು ಜನಾರ್ದನನ ಭಕ್ತಿಯಲ್ಲಿ ತೇಲಿಸಬಲ್ಲವು. ಉದಯೋನ್ಮುಖ ಕನ್ನಡ ಕುವರರು ಅವನ್ನು ತಮ್ಮ ಜೀವನದಲ್ಲಿ ಸರಿಯಾಗಿ ಬಳಸಿಕೊಳ್ಳಬಹುದಲ್ಲವೇ? ಈ ಅಮರ ಬೆಳಕಿನಲ್ಲಿ ಮಿಂದು ಮಡಿಯಾಗಿ, ತಮ್ಮ ಪಾವನ ಭಾವಕರ್ಮ ಕುಸುಮಗಳಿಂದ ಭಗವಂತನನ್ನು ಆರಾಧಿಸಿ ಆತನ ದಿವ್ಯ ಕರುಣ-ಸುಧೆಯನ್ನು ಪಡೆಯಬಹುದಲ್ಲವೇ? ತಾವು ಅಮರ ಜೀವವನ್ನು ಬಾಳಿ, ತಮ್ಮವರನ್ನು ಉದ್ಧರಿಸ ಬಹುದಲ್ಲವೆ?

(೫)

'ಭಕ್ತಿ ಸುಮನಾಂಜಲಿ'ಯು ಸಿದ್ಧವಾಗಿ ಒಂದೂಕಾಲು ತಪವಾಯಿತು. 'ಮಿಂಚಿನ ಬಳ್ಳಿ"ಯ ಸಂಚಾಲಕರಾದ ಗೆಳೆಯ ಬುರ್ಲಿಯವರು ಇದರ ಪ್ರಕಟನೆಯ ಹೊಣೆಯನ್ನು ವಹಿಸದಿದ್ದರೆ ಇದು ಕೈಬರಹದ ಸ್ಥಿತಿಯಲ್ಲಿ ಹಾಗೆಯೆ ಉಳಿಯಬಹುದಾಗಿತ್ತು. ಗೆ. ಬಿಂದುಮಾಧವರ ನೆರವಿನ ಮೂಲಕವೆ 'ಸುಮನಾಂಜಲಿ'ಯು ಈ ರೂಪದಲ್ಲಿ ಕನ್ನಡ ಕುವರರ ಕೈಯಲ್ಲಿ ಬೀಳಲು ಅನುಕೂಲವಾಯಿತು. ಅದಕ್ಕಾಗಿ ಶ್ರೀ. ಬುರ್ಲಿಯವರಿಗೆ ನನ್ನಂತೆ ಅವರೂ ಹಾರ್ದಿಕ ಅಭಿವಂದನೆಗಳನ್ನು ಅರ್ಪಿಸುವರೆಂದು ನಂಬಿರುವೆ.

ಇದರಲ್ಲಿ ಹತ್ತು ಗೊಂಚಲಗಳು. ಪ್ರತಿಯೊಂದು ಗೊಂಚಲದ ಆದಿಯಲ್ಲಿ ನಮ್ಮ ಸಂಸ್ಕೃತಿಯ ಭಾಷೆಯಾದ ಸಂಸ್ಕೃತದಲ್ಲಿಯ ಕೆಲ ಪದ್ಯಗಳ ಮುಖಾಂತರ, ಅದರ ಮಕರಂದವನ್ನು ಅರುಹಲಾಗಿದೆ. ಮುಂದೆ ಸತ್ಪುರುಷರಿಂದ ರಚಿತವಾದ ಪದ್ಯಗಳು-ಪದಗಳು-ವಚನಗಳು ಬಂದಿವೆ. ಈ ಬಗೆಯಾಗಿ ಹಿರಿಯರ ಅನುಭವವನ್ನು ಕನ್ನಡಿಗರೆದುರು ಇಡುವ ಅಲ್ಪಯತ್ನ ಮಾಡಲಾಗಿದೆ.

ಇದರಲ್ಲಿಯ ಕೆಲ ಕನ್ನಡ ಪದಗಳು ಶ್ರೀಗುರುದೇವ ರಾನಡೆಯವರ ಪದ ಸಂಗ್ರಹದಿಂದ ಆಯ್ದುಕೊಳ್ಳಲಾಗಿವೆ. ಅವರ ಆಶೀರ್ವಾದದ ಬಲವೇ ನನ್ನ ಬರವಣಿಗೆಗೆ ಪ್ರೇರಕ ಶಕ್ತಿ. ಅವರಿತ್ತ ಬೆಳಕಿನಿಂದಲೇ ನನಗೆ ಮಾರ್ಗದರ್ಶನ. ಅವರಿಗೆ ನನ್ನ ಅನಂತ ವಂದನೆಗಳು. ಉಳಿದ ಪದಪದ್ಯ-ವಚನಗಳು ಹಲವಾರು ಹಿರಿಯ ಸಂತ ಕವಿಗಳ ಕೃತಿಗಳಿಂದ ಆಯ್ದವು. ' ಸುಮನಾಂಜಲಿ ' ಯ ಪರಿಮಳವು ಅವರ ' ಸುಮನಗಳ ' ವು. ' ಅಂಜಲಿ ' ಯ ರಚನೆಯಲ್ಲಿಯ ಗುಣದೋಷಗಳು ನನ್ನವು. ಅವನ್ನು ಹಿರಿಯರು ನನಗೆ ತಿಳಿಸಿದರೆ, ಮುಂದೆ ಬರೆಯಲು ಬೆಳಕು, ಇದ್ದುದನ್ನು ತಿದ್ದಲು ಅನುಕೂಲ. ನನ್ನ ಈ ಕೆಲಸದಲ್ಲಿ, ತಮ್ಮ ಕೆಲ ಪುಸ್ತಕಗಳನ್ನೂ ನಲಹೆಗಳನ್ನೂ ನೀಡಿದ ನನ್ನ ನಚ್ಚಿನ ಗೆಳೆಯರಾದ ಶ್ರೀ. ನಂಗೋರಾಮ ಕೃಷ್ಣರಾಯರಿಗೂ, ಪ್ರಸ್ತಾವನೆಯ ಬಹಿರಂಗವನ್ನು ಕುರಿತು ನಲಹೆಯನ್ನು ಇತ್ತುದ್ದಕ್ಕಾಗಿ ನನ್ನ ಮಾನ್ಯ ಗೆಳೆಯರಾದ ಪ್ರಿ. ಗೋಕಾಕ ವಿನಾಯಕರಾಯರಿಗೂ ನಾನು ತುಂಬಾ ಋಣಿಯಾಗಿರುವೆ.

ಈ ' ಸುಮನಾಂಜಲಿ ' ಯನ್ನು ಒಲವಿನಿಂದ ಸ್ವೀಕರಿಸಿ, ಕನ್ನಡ ಕುಲದ ಅದೇ ಮೇರೆಗೆ ಭಾರತಕುಲದ ಭಾಗ್ಯಪುರುಷನಾದ ಷಡ್ಗುಣೈಶ್ವರ್ಯ ಭಗವಂತನು ತನ್ನ ಹಿರಿ ಕರುಣದ ಅಮೋಘವಾದ ಮಳೆಯನ್ನು ಕರೆಯಲಿ! ಆತನ ಆ ದಿವ್ಯ ಕರುಣಾಮೃತವು ನಮ್ಮ ನಾಡಿನಲ್ಲಿ ಮಹಾಪುರುಷರನ್ನು ಹುಟ್ಟಿಸಲಿ! ಮತ್ತು ಶ್ರೀ ವಾದಿರಾಜಸ್ವಾಮಿಗಳು ಉಸುರಿದ ಮೇರೆಗೆ, ನಮ್ಮ ನಾಡವರು,

" ಉಕ್ಕಿ ಹರಿಯ ಪೊಗಳಿ
ಅವನಂಗಣದಿ ಹೊರಳಿ,
ಶುಷ್ಕ ತರ್ಕಂಗಳಮೇಲೆ ಉಗುಳಿ,"

ಭಕ್ತಿಜ್ಞಾನಗಳಿಂದ, ಮೃತ್ಯು ಪಥದಿಂದ ಮರಳಿ, ಮುಕ್ತಿ ಮಾರ್ಗದಲಿನ್ನು ತೆರಳಲಿ! ಎಲ್ಲರನ್ನು ಅದೇ ದಾರಿಯಿಂದ ಒಯ್ಯಲಿ! ಇದೇ ಆತನ ಅಡಿದಾವರೆಗಳಲ್ಲಿ ಕೊನೆಯ ಬಿನ್ನಹ.

ಶಾಂತಿಕುಂಜ
ವಿಕ್ರಮಪುರ
ಅಥಣಿ

ಕಾರ್ತಿಕ ಹುಣ್ಣಿವೆ
೧೮೭೧
ದಿ. ೫-೧೧-೪೯

ತಮ್ಮ ವಿಧೇಯ

**ಮ. ಶ್ರೀ. ದೇಶಪಾಂಡೆ**

# ಮಕರಂದ

ಪೂರ್ಣಮದಃ ಪೂರ್ಣಮಿದಂ
ಪೂರ್ಣಾತ್ ಪೂರ್ಣಮುದಚ್ಯತೆ ।
ಪೂರ್ಣಸ್ಯ ಪೂರ್ಣಮಾದಾಯ
ಪೂರ್ಣಮೇವಾವ-ಶಿಷ್ಯತೆ ॥ ೧ ॥

—ಬೃಹದಾರಣ್ಯಕ

ಯತೋ ವಾ ಇಮಾನಿ ಭೂತಾನಿ ಜಾಯಂತೆ ।
ಯೇನ ಜಾತಾನಿ ಜೀವಂತಿ ।
ಯತ್ ಪ್ರಯಂತಿ ಅಭಿವಿಶಂತಿ
ತದ್ವಿಜಿಜ್ಞಾಸಸ್ವ । ತದ್ ಬ್ರಹ್ಮೇತಿ ॥ ೨ ॥

—ತೈತ್ತಿರೀಯ

ತಮೇವ ಭಾಂತಮನುಭಾತಿ ಸರ್ವಂ ।
ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ ೩ ॥

—ಕಠ

ಸಭೂಮಿಂ ವಿಶ್ವತೋ ವೃತ್ವಾ- ।
ತ್ಯತಿಷ್ಠದ್ದಶಾಂಗುಲಮ್ ॥ ೪ ॥

—ಶ್ವೇತಾಶ್ವತರ

ಸತ್ಯಂ ಜ್ಞಾನಮನಂತಂ ಬ್ರಹ್ಮ ॥ ೫ ॥

—ತೈತ್ತಿರೀಯ

# ಭಾರತೀಯ

## ಪ್ರಾರ್ಥನೆ

### ವೈದಿಕ

( ೧ )

ಅಸತೋ ಮಾ ಸದ್ಗಮಯ ।
    ತಮಸೋ ಮಾ ಜ್ಯೋತಿರ್ಗಮಯ ।
ಮೃತ್ಯೋರ್ಮಾ ಅಮೃತಂ ಗಮಯ ॥ ೧ ॥

**ಭಾವಾನುವಾದ**

( ಅಸತಿನಿಂದ ಸತ್ಯದೆಡೆಗೆ ।
    ಕತ್ತಲೆಯಿಂ ಜ್ಯೋತಿಯೆಡೆಗೆ ।
ಮರಣದಿಂದ ಅಮರ ಬಾಳಿನೆಡೆಗೆ
    ನಡೆಯಿಸೈ । )

—o—

ಸಮಾನಿ ವ ಆಕೂತಿಃ ।
    ಸುಮಾನಾ ಹೃದಯಾನಿ ವಃ ॥
ಸಮಾನಮಸ್ತು ವೋ ಮನೋ ।
    ಯಥಾ ವಃ ಸುಸಹಾಸತಿ ॥ ೨ ॥

**ಭಾವಾನುವಾದ**

( ನಿಮ್ಮ ಗುರಿಯು ಸಮಾನವಿರಲಿ !
    ಭಾವವು ಸಮಾನವಿರಲಿ !
ಬುದ್ಧಿಯು ಸಮಾನವಿರಲಿ ! ಅಂದರೆ
    ನಿಮ್ಮ ಸಹಜೀವನವು ಸುಖಮಯವಾಗುವದು )

—o—

ಅಜಿತಾಃ ಸ್ಯಾಮ ಶರದಃ ಶತಮ್ ।
    ಅದೀನಾಃ ಸ್ಯಾಮ ಶರದಃ ಶತಮ್ ॥ ೩ ॥

## ಭಾವಾನುವಾದ

( ನಾವು ನೂರು ವರುಷ ಗೆಲಪಿನ
ಬಾಳನ್ನು ಬಾಳುವಾ ! ವೈಭದ
ಬಾಳನ್ನು ಬಾಳುವಾ ! )

— ೦ —

ಸಹ ನಾವವತು । ಸಹನೌ ಭುನಕ್ತು ।
ಸಹ ವೀರ್ಯಂ ಕರವಾವಹೈ ।
ತೇಜಸ್ವಿ ನಾವಧೀತಮಸ್ತು ।
ಮಾ ವಿದ್ವಿಷಾವಹೈ ॥ ೪ ॥
ಓಂ ಶಾಂತಿಃ ಶಾಂತಿಃ ಶಾಂತಿಃ

## ಭಾವಾನುವಾದ

( ಕೂಡಿಯೆ ಬಾಳುವಾ । ಕೂಡಿಯೆ ಬೆಳೆಯುವಾ ।
ಕೂಡಿಯೆ ಹೊಳೆಯುವಾ । ಕಾಂತಿಯನು ತಳೆದು ।
ಶಾಂತಿಯನು ಬೀರುವಾ । ದ್ವೇಷವನು ಕಳೆದು । )

— ೦ —

## ಪೌರಾಣಿಕ

( ೨ )

ವಕ್ರತುಂಡ ಮಹಾಕಾಯ
ಸೂರ್ಯಕೋಟಿ ಸಮಪ್ರಭ ।
ನಿರ್ವಿಘ್ನಂ ಕುರು ಮೇ ದೇವ
ಸರ್ವಕಾರ್ಯೇಷು ಸರ್ವದಾ ॥ ೫ ॥

ಗಣನಾಥ ಸರಸ್ವತೀ –
ರವಿಶುಕ್ರ – ಬೃಹಸ್ಪತೀನ್ ।
ಪಂಚೈತಾನ್ ಸಂಸ್ಮರೇನ್ನಿತ್ಯಂ
ವೇದವಾಣಿ ಪ್ರವರ್ತಯೇ ॥ ೬ ॥

ಮೂಕಂ ಕರೋತಿ ವಾಚಾಲಂ
ಪಂಗುಂ ಲಂಘಯತೇ ಗಿರಿಮ್ ।
ಯತ್ ಕೃಪಾ ತಮಹಂ ವಂದೇ
ಪರಮಾನಂದ ಮಾಧವಂ ॥ ೭ ॥

ಓಂ ನಮಃ ಶಿವಾಯ ಶಾಂತಾಯ
ನಿರ್ಗುಣಾಯ ಗುಣಾತ್ಮನೇ ।
ಸಮಸ್ತ—ಜಗದಾಧಾರ—
ಮೂರ್ತಯೆ ಬ್ರಹ್ಮಣೇ ನಮಃ ॥ ೮ ॥

ಬ್ರಹ್ಮಾನಂದಂ ಪರಮಸುಖದಂ
ಕೇವಲಂ ಜ್ಞಾನಮೂರ್ತಿಂ ।
ದ್ವಂದ್ವಾತೀತಂ ಗಗನಸದೃಶಂ
ತತ್ವಮಸ್ಯಾದಿಲಕ್ಷ್ಯಂ ॥
ಏಕಂ ನಿತ್ಯಂ ವಿಮಲಮಚಲಂ
ಸರ್ವಧೀ—ಸಾಕ್ಷಿಭೂತಂ ।
ಭಾವಾತೀತಂ ತ್ರಿಗುಣರಹಿತಂ
ಸದ್ಗುರುಂ ತಂ ನಮಾಮಿ ॥ ೯ ॥

ಯಂ ಶೈವಾಃ ಸಮುಪಾಸತೇ ಶಿವ ಇತಿ
ಬ್ರಹ್ಮೇತಿ ವೇದಾಂತಿನಃ ।
ಬೌದ್ಧಾ ಬುದ್ಧ ಇತಿಪ್ರಮಾಣ ಪಟವಃ
ಕರ್ತೇತಿ ನೈಯಾಯಿಕಾಃ ॥
ಅರ್ಹಚ್ಚೇತಿ ಹಿ ಜೈನಶಾಸನಮತಿ:—
ಕರ್ಮೇತಿ ಮೀಮಾಂಸಕಾಃ ॥
ಸೋಯಂ ವೋ ವಿದಧಾತು ವಾಂಛಿತಫಲಂ
ಶ್ರೀಕೇಶವೇಶಃ ಸದಾ ॥ ೧೦ ॥

ಜಿಹ್ವೇ ಕೀರ್ತಯ ಕೇಶವಂ ಮುರರಿಪುಂ
ಚೇತೋ ಭಜ ಶ್ರೀಧರಂ ।

ಪಾಣಿದ್ವಂದ್ವ ಸಮರ್ಚಯಾಚ್ಯುತ ಕಥಾಂ
ಶ್ರೋತ್ರದ್ವಯ ತ್ವಂ ಶೃಣು ॥
ಕೃಷ್ಣಂ ಲೋಕಯ ಲೋಚನದ್ವಯ ಹರೇ
ರ್ಗಚ್ಛಾಂಘ್ರಿ ಯುಗ್ಮಾಲಯಂ ।
ಜಿಘ್ರ ಘ್ರಾಣ ಮುಕುಂದ–ಪಾದ–ತುಲಸೀಂ
ಮೂರ್ಧನ್ನಮಾಧೋಕ್ಷಜಂ ॥ ೧೧ ॥

— ೦ —

## ಆಧುನಿಕ

( ೩ )

ಹೇ ಪ್ರಭೋ ಆನಂದದಾತಾ !
ಜ್ಞಾನ ಹಮ್ಕೋ ದೀಜಿಯೇ !
ಶೀಘ್ರಸಾರೇ ದುರ್ಗುಣೋಂಸೇ
ದೂರ ಹಮ್ಕೋ ಕೀಜಿಯೇ ॥
ಲೀಜಿಯೆ ಹಮ್ಕೋ ಶರಣ್ಮೇ
ಹಮ್ ಸದಾಚಾರೀ ಬನೇ
ಬ್ರಹ್ಮಚಾರೀ ವೀರ್ಯರಕ್ಷಕ
ವೀರವ್ರತಧಾರೀ ಬನೇ ॥ ೧೨ ॥

( ವಿಶ್ವದೊಡೆಯ ದುರಿತಗಳನು
ದೂರ ಹೋಗಲಾಡಿಸೈ !
ಆವುದೆಮ್ಮ ಶಿವಕೆ ತಂದೆ
ಅದನು ಬೇಗ ಕರುಣಿಸೈ ॥
ಜ್ಞಾನದೀಪ ಹೊತ್ತಿಸೆಮಗೆ
ವೀರ್ಯವ ದಯಪಾಲಿಸೈ !
ಆತ್ಮಶಿವಕೆ ನಿನ್ನ ಬಯಕೆ
ಗೆಮ್ಮ ಬಾಳ ಹೊಂದಿಸೈ ॥ )

— ೦ —

# (ಅ) ಪದಗಳು:—

## ಏಕೋऽಹಂ ಬಹುಸ್ಯಾಮ್

( ೧ )

(ರಾಗ—ಜಯಜಯ ಹಂತಿ—ದಾದರಾತಾಳ)

ಪ್ರಥಮ ಓಂ ಕರೊ ಬಿಚಾರ
ಸತ- ಚಿತ- -ನಿರಂಜನ ॥ ಪ ॥

ವಿಶ್ವ ಸಕಲ ನಾಟಕ ಹೈ
ವಿಶ್ವನಾಥ ನಾಟ್ಯಕಾರ ।
ಕರತಾರ ಸೂತ್ರಧಾರ ॥ ೧ ॥

### ಭಾವಾನುವಾದ

ಮೊದಲು ಪ್ರಣವರೂಪಿಯಾದ ಸಚ್ಚಿದಾನಂದ ಪರಮಾತ್ಮನ ವಿಚಾರವನ್ನು ಮಾಡಿರಿ. ಇಡೀ ವಿಶ್ವವು ಒಂದು ನಾಟಕವು. ವಿಶ್ವನಾಥನು ಅದರ ಕರ್ತಾರನು, ಸೂತ್ರಧಾರನು, ನಾಟ್ಯಕಾರನು.

—೦—

## ತಸ್ಯ ಭಾಸಾ ಸರ್ವಮಿದಂ ವಿಭಾತಿ

( ೨ )

(ರಾಗ—ಸಾಳಂಗ ರೂಪಕತಾಳ)

ಆ ದೇವನ ವರಪದ್ಮವ –
ನಾವಗಮಭಿವಂದಿಸುವೆವು ।
ಮೂದೇವರ ನಾಮಕ್ರಿಯ –
ರೂಪಗಳಳಿದುಳಿದ ॥ ಪ ॥

ಆವನ ಲೇಶಗಳಿಂದ್ರಾ –
ಚ್ಯುತ–ಹರ–ವಿಧಿ–ಮುಖ ನಿರ್ಜರ ।

ಆವನ ಭಾಸಾಂಶಗಳಿನ –
ಶಶಿಮುಖ ತೇಜಗಳು ॥

ಆವನು ಮಹದಹವಾದಿಯ
ಬುದ್ಬುದಗಳಿಗಂಬುಧಿಯಹ ।
ಆವನ ಸತ್ತಾದ್ಯಂತದ –
ಕೋಟಿಯ ದಾಂಟಿಹುದು ॥ ೧ ॥

—ಸರ್ಪಭೂಷಣ.

— ೦ —

## ಭಾವದಂತೆ ದೇವ

( ೩ )

(ರಾಗ—ಸಾರಂಗ; ಝಂಪತಾಳ)

ಸಕಲಕೆಲ್ಲಕೆ ನೀನೆ । ಅಕಲಂಕ ಗುರುದೇವ ।
ನಿಖಿಳ ಶಾಸ್ತ್ರವು ಪೇಳುತಿರಲರಿದೆನು ॥ ಪ ॥

ಅವರವರ ದರುಶನಕೆ । ಅವರವರ ವೇಷದಲಿ ।
ಅವರವರಿಗೆಲ್ಲ ಗುರು ನೀನೊಬ್ಬನೆ ॥

ಅವರವರ ಭಾವಕ್ಕೆ । ಅವರವರ ಪೂಜೆಗಂ ।
ಅವರವರಿಗೆಲ್ಲ ದೇವ ನೀನೊಬ್ಬನೆ ॥ ೧ ॥

ಹೋರಾಟ ವಿಕ್ಕಿಸಲು । ಬೇರಾದೆಯಲ್ಲದೆ ।
ಬೇರುಂಟೆ ಜಗದೊಳಗೆ ಎಲೆ ದೇವನೆ ॥

ಆರು ಅರಿಯರು ನೀನು । ಬೇರಾದ ಪರಿಗಳನು ।
ಮಾರಾರಿ **ಶಿವಷಡಕ್ಷರಿ** ಲಿಂಗವೇ ॥ ೨ ॥

—ಷಡಕ್ಷರಿ.

— ೦ —

## ಸಗುಣ ನಿರ್ಗುಣ ಸ್ವಾಮಿಗೆ ಶರಣು

( ೪ )

(ರಾಗ—ಸಾಳಂಗ-ತೋಡಿ ದಾದರಾತಾಳ)

ಅಂದಿಲ್ಲ ಸ್ವಾಮಿ ಇಂದಿಲ್ಲ ।
ಎಂದಿಗಾದರು ನಿಮ್ಮಗಲಿ ನಾ ಇಲ್ಲ ॥ ಪ ॥

ನಿರ್ಬೈಲ ನೀನು । ನಿರ್ವಿಕಾರನು ನಾನು ।
ಸಗುಣರೂಪ ನೀನು । ಶರಣು ಮಾಡುವೆನಾನು ॥ ೧ ॥

ಪಂಚವದನ ನೀನು । ಪಾದ ನಂಬಿದೆ ನಾನು ।
ಜಗಭರಿತ ನೀನು । ಜಗದ ಒಳಗೆ ನಾನು ॥ ೨ ॥

ಪ್ರಣವಸ್ವರೂಪ ನೀನು । ಪಠಿಸಿ ನೋಡುವೆ ನಾನು ।
**ಗುರು**ಲಿಂಗ **ಜಂಗಮ**ನೀನೇ । ನಾನೂ ನೀನೇ ॥ ೩ ॥

—ನಿಂಬರಗಿ ಮಹಾರಾಜ.

— o —

## ಎಲ್ಲವೂ ನಿನ್ನಲ್ಲಿ

( ೫ )

(ರಾಗ—ಕಾಂಬೋಧಿ, ಝಂಪೆ ತಾಳ)

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ ॥ ಪ ॥
ನೀ ದೇಹದೊಳಗೊ ನಿನ್ನೊಳು ದೇಹವೊ ॥ ಅ ॥

ಬಯಲೊಳಗೆ ಆಲಯವೊ ಆಲಯದೊಳಗೆ ಬಯಲೊ ?
ಬಯಲು ಆಲಯವೆರಡು ನಯನದೊಳಗೊ ।

ನಯನ ಬುದ್ಧಿಯ ಒಳಗೊ, ಬುದ್ಧಿ ನಯನದ ಒಳಗೊ ?
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ? ॥ ೧ ॥

ಸವಿಯು ಸಕ್ಕರೆಯೊಳಗೊ, ಸಕ್ಕರೆಯು ಸವಿಯೊಳಗೊ ?
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ ।

ಜಿಹ್ವೆ ಬುದ್ಧಿಯ ಒಳಗೊ, ಬುದ್ಧಿ ಜಿಹ್ವೆಯ ಒಳಗೊ ?
ಜಿಹ್ವೆ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥ ೨ ॥

ಕುಸುಮದೊಳು ಗಂಧವೊ, ಗಂಧದೊಳು ಕುಸುಮವೊ ?
ಕುಸುಮ ಗಂಧಗಳೆರಡು ಘ್ರಾಣದೊಳಗೊ ।

ಅಸಮಭವ **ಕಾಗಿನೆಲೆಯಾದಿಕೇಶವ** ನಿನ್ನ
ಉಸುರಲೆನ್ನೊಶವೆ ಸರ್ವವು ನಿನ್ನೊಳರಿಯೆ ॥ ೩ ॥

—ಕನಕದಾಸ.

—೦—

## ಪಾಲಿಸೈ ಆತ್ಮಾರಾಮ

( ೬ )

(ರಾಗ—ಭೂಪಾಲಿ–ಧುಮಾಳಿ)

ಏಳಯ್ಯಾ ಆತ್ಮಾರಾಮಾ !
ಯತಿ ಮುನಿಜನ ಪ್ರೇಮಾ ।
ಏಳಯ್ಯಾ ಘನಶ್ಯಾಮಾ !
ಎನ್ನ ಪಾಲಿಸೈ ಗುಣಧಾಮಾ ॥ ಪ ॥

ಗುರುಕರುಣೋದಯದಲ್ಲಿ
ಬೋಧಸೂರ್ಯನು ಬರಲು ।
ಮರವಿನ ಕತ್ತಲಿ ತೆರಳಿ
ಬೆಳಗಾಯಿತು ಮನದಲ್ಲಿ ॥ ೧ ॥

ವಾದ ತಾರೆಗಳಡಗಿ
ವಿಕಸಿತ ಹೃತ್ಕಮಲಾಗಿ ।
ಸಾಧನ ಪಕ್ಷಿಗಳೊದಗಿ
ಕಲಕಲಿಸುತಿವೆ ಬಹುವಾಗಿ ॥ ೨ ॥

ಶಮದಮವೇ ನಿಸ್ಸೀಮ
ಬಿಭಿಷಣ ಸುಗ್ರೀವ ನೇಮ ।
ಸುಮತಿ ಶ್ರದ್ಧಾ ಪರಮಾ
ಇದೊ ಬಂದರು ಜಾಂಬುವ ಹನುಮಾ ॥ ೩ ॥

ಶಾಂತಿ ಸೀತೆಯು ಒಲಿದು
ನಿಂತಿಹಳೆ ಕೈಮುಗಿದು ।
ಸಂಚಿತಾರ್ಥವನೆ ಕೊಡು
**ಮಹಿಪತಿಸುತ**ಗೊಲಿದು ॥ ೪ ॥

—ಕೃಷ್ಣರಾಯ.

—೦—

## (ಆ) ಪದ್ಯಗಳು :—

### ಚಿತ್ ಸ್ತೋತ್ರ.

( ೧ )

ವರಾನಂದ ಚಿದ್ರೂಪ ಹೃಧ್ಯಾನದೀಪ-
ನಿರಾಧಾರ ನಿರ್ಲೇಪ ಸತ್ಯಸ್ವರೂವ ।
ಪರಂಧಾಮು ನಿಷ್ಕಾಮು ಲೋಕಾಭಿರಾಮು
ನಿರಾಕಾರ ಸಾಕಾರ ಮಾಂ ಪಾಹಿ ಪಾಹಿ ॥ ೧ ॥

ಸದಾ ಜ್ಞಾನಸಿಂಧು ತ್ರಿಲೋಕಾಪ್ತ ಬಂಧು
ಚಿದಾಕಾಶ ಮಧ್ಯಸ್ಥ ದೇದೀಪ್ಯ ಬಿಂದು ।
ಬುಧೇಂದ್ರಾದಿ ಸಂಸ್ತುತ್ಯ ಆತ್ಮೇಶ ನಿಮ್ಮ
ಪದಾಂಭೋಜನಂಬಿರ್ಪೆಮಾಂ ಪಾಹಿ ಪಾಹಿ ॥ ೨ ॥

ಹರಿಬ್ರಹ್ಮ ಹರಸ್ತುತ್ಯ ಇಂದ್ರಾದಿ ಸೇವ್ಯಂ
ಪರಬ್ರಹ್ಮ ನಿತ್ಯಾತ್ಮ ನಿರ್ದ್ವಂದ್ವ ನಿತ್ಯಂ ।
ಸ್ವರೂಪಾನುಸಂಧಾನ ಬೋಧಾರ್ಯವರ್ಯ್ಯ
ಸ್ಮರೇನ್ನಿತ್ಯ ಚಿನ್ಮಾತ್ರ ಮಾಂ ಪಾಹಿ ಪಾಹಿ ॥ ೩ ॥

—ಶಂಕರಾನಂದ.

—೦—

### ನಿತ್ಯಾನಂದ ಪರಂಜ್ಯೋತಿ.

( ೨ )

ಕನ್ನಡಿಯು ಪಳಿಯುವರ ಮನೆಯೊಳಗೆ ತಾನಿರ್ದು
ತನ್ನೊಳಗೆ ಮನೆಯನೆಲ್ಲವ ತೋರುವಂದದಲಿ
ಪನ್ನಂಗ ಭೂಷಣನೆ ನಿಮ್ಮೊಳಗೆ ಜಗವನೆಲ್ಲವ ತಾಳಿಕೊಂಡ ಬಳಿಕ ।
ಇನ್ನೇನು ಪೇಳ್ವೆ ಜಗದೊಳಗೆಲ್ಲ ನೀನಿರ್ದು
ನನ್ನಿಯಿಂದರಿವ ಜಾಣರ್ಗೆರೂಪಂ ತೋರ್ಪ
ವುನ್ನತೋನ್ನತ ಮಹಿಮ ನಿಜಲಿಂಗ ಭವಭಂಗ ಶರಣ ಜನ ಭಕ್ತಸಂಗಾ॥ ೧ ॥

ಹಲವು ಜಲಕುಂಭದೊಳು ಭಾನುವಿನ ಪ್ರತಿಬಿಂಬ
ಗೆಲವಾಗಿ ತೋರುತಿರೆ, ಗಗನದಲಿ ರಥದಿ ರವಿ-
ಸಲೆ ತೇಜದಿಂದೋರ್ವನಿರುವಂತೆ, ಪದಿನಾಲ್ಕು ಲೋಕದೊಳಗರ್ಥಿಯಿಂದ ।
ನೆಲೆಗೊಂಡು ಪಿಂಡಾಂಡ ಬ್ರಹ್ಮಾಂಡದಲಿ ತುಂಬಿ
ನಲಿನಲಿದು ನೀವೆ ನೀವಾಗಿರ್ದು ಜಗದೊಡೆಯ
ಮಲಹರನೆ ಮಹದೇವ ನಿಜಲಿಂಗ ಭವಭಂಗ— ಸಂಗಾ ॥ ೨ ॥

ಆವ ಮನೆಯೊಳಗಿರ್ದ ಜ್ಯೋತಿಗಳ ಕಳೆಯೊಂದೆ
ಆವ ಪಶುವಿನಲಿ ಬಹ ಕ್ಷೀರಗಳ ಸವಿಯೊಂದೆ
ಆವ ನೆಲದೊಳು ಬೆಳೆದ ತಿಲದೊಳಗೆ ಬರ್ಪ ತೈಲವ ನೋಡೆ ಗುಣವದೊಂದೆ ।
ಆವ ಕುಲದೊಳಗಿರಲದಾವ ನಾಮದೊಳಿರಲು
ಆವ ರೂಪಾಗಿರಲು ಒಳಗಿಹ ಪರಂಜ್ಯೋತಿ
ದೇವ ನೀನಹುದಹುದು ನಿಜಲಿಂಗ— ಸಂಗಾ ॥ ೩ ॥

ದಧಿಯ ಮಥನಿಸಲಾಗಿ ನವನೀತ ತೋರ್ಪಂತೆ
ಸುಧೆಗೋಲ ಮಥನಿಸಲು ಸಕ್ಕರೆಯುದಿಸುವಂತೆ
ಮುದದಿಂದ ಚಂದನವ ತೇಯಲಾಕ್ಷಣದಲ್ಲಿ ಶ್ರೀಗಂಧಮುಣ್ಮುವಂತೆ ।
ಅಧಿಕಜ್ಞಾನಾರೂಢರಾಗಿ ನಿಟ್ಟಿಸುವ ಸದು
ಹೃದಯರಿಗೆ ತಾನೆತಾನಾಗಿ ಸವಿಗೊಡುವ ದಯ-
ನಿಧಿಯೆ! ನಿತ್ಯಾನಂದ **ನಿಜಲಿಂಗ ಭವಭಂಗ** ಸಂಗಾ ॥ ೪ ॥

—ನಿಜಲಿಂಗ

—೦—

## ಏನು ಕರುಣಾನಿಧಿಯೊ ಸರ್ವಗತ ಹರಿಯು ?

( ೩ )

ನಿತ್ಯ ನಿಗಮಾತೀತ ನಿರ್ಗುಣ
ಭೃತ್ಯವತ್ಸಲ ಭಯ ವಿನಾಶನ
ಸತ್ಯಕಾಮ ಶರಣ್ಯ ಶಾಮಲ ಕೋಮಲಾಂಗ ಸುಖಿ

ಮತ್ತನಂದದಿ ಮರ್ತ್ಯರೊಳಹೊರ
ಗೆತ್ತ ನೋಡಲು ಸುತ್ತುತ್ತಿಪ್ಪನು
ಅತ್ಯಧಿಕ ಸಂತೃಪ್ತ ತ್ರಿಜಗದ್ವ್ಯಾಪ್ತ ನಿರ್ಲಿಪ್ತ ॥ ೧ ॥

ಎಲ್ಲಿ ಕೇಳಿದರೆಲ್ಲಿ ನೋಡಿದ
ರೆಲ್ಲಿ ಬೇಡಿದರೆಲ್ಲಿ ನೀಡಿದ
ರೆಲ್ಲಿ ಓಡಿದರೆಲ್ಲಿ ಆಡಿದರೆಲ್ಲಿ ಇರುತಿಹನು ।
ಬಲ್ಲಿದರಿಗತಿ ಬಲ್ಲಿದನು ಸರಿ-
ಯಿಲ್ಲಯಿವಗಾವಲ್ಲಿ ನೋಡಲು
ಖುಲ್ಲ ಮಾನವನೊಲ್ಲನಪ್ರತಿಮಲ್ಲ ಜಗಕೆಲ್ಲ ॥ ೨ ॥

ಮಳಲ ಮನೆಗಳ ಮಾಡಿ ಮಕ್ಕಳು
ಕೆಲವು ಕಾಲರಲಾಡಿ ಮೋದದಿ
ತುಳಿದು ಕೆಡಿಸುವ ತೆರದಿ ಲಕ್ಷ್ಮೀರಮಣ ಲೋಕಗಳ ।
ಹಲವು ಬಗೆಯಲಿ ನಿರ್ಮಿಸುವ ನಿ-
ಶ್ಚಲನು ತಾನಾಗಿದ್ದು ನಲಹುವ
ಎಲರುಣಿಯವೊಲು ನುಂಗುವಗೆ ಎಲ್ಲಿಹುದು ಸುಖದುಃಖ ॥ ೩ ॥

ಎಲ್ಲರೊಳು ತಾನಿಪ್ಪ ತನ್ನೊಳ-
ಗೆಲ್ಲರನು ಧರಿಸಿಹನು ಅಪ್ರತಿ-
ಮಲ್ಲ ಮನ್ಮಥ ಜನಕ ಜಗದಾದ್ಯಂತ ಮಧ್ಯಗಳ ।
ಬಲ್ಲ ಬಹುಗುಣ ಭರಿತ ದಾನವ
ದಲ್ಲಣ **ಜಗನ್ನಾಥ ವಿಠಲನು**
ಸೊಲ್ಲ ಲಾಲಿಸಿ ಸ್ತಂಭದಿಂದಲಿ ಬಂದ ಭಕತನಿಗೆ ॥ ೪ ॥

—ಜಗನ್ನಾಥದಾಸ

—೦—

## ದೇವರ ದೇವ

### ( ೪ )

ಒಬ್ಬನಲ್ಲದೆ ಜಗಕೆ ಇಬ್ಬರುಂಟೆ? ಮತ್ತೆ
ಒಬ್ಬ ಸರ್ವಜ್ಞ ಕರ್ತನು ಜಗಕೆಲ್ಲ
ಒಬ್ಬನೇ ದೈವ! ಸರ್ವಜ್ಞ ॥ ೧ ॥

ಆ ದೇವ, ಈ ದೇವ, ಮಾದೇವನೆನಬೇಡ
ಆ ದೇವರ ದೇವ ಭುವನ ಪ್ರಾಣಿಗಳಿ
ಗಾದವನೇ ದೇವ ಸರ್ವಜ್ಞ ॥ ೨ ॥

ಆಗಿಲ್ಲ ಹೋಗಿಲ್ಲ ಮೇಗಿಲ್ಲ ಕೆಳಗಿಲ್ಲ
ತಾಗಿಲ್ಲ ತಪ್ಪು ತಡೆಯಿಲ್ಲ ಲಿಂಗಕ್ಕೆ
ದೇಗುಲವೆ ಇಲ್ಲ ಸರ್ವಜ್ಞ ॥ ೩ ॥

ಒಂದರಾ ಮೊದಲೊಳಗೆ ಬಂದಿಹುದು ಜಗವೆಲ್ಲ
ಒಂದರಾ ಮೊದಲನರಿದಡೆ ಜಗ ಕಣ್ಣ
ಮುಂದೆ ಬಂದಿಹುದು ಸರ್ವಜ್ಞ ॥ ೪ ॥

ವನಧಿಯೊಳಗಡಗಿ ತೆರೆ ವನಧಿಯೊಳಗೆನೆವಂತೆ
ಚಿನುಮಯನಿಪ್ಪ ನಿಜದೊಳು ತ್ರೈಜಗದ
ಜನನ ತಾನೆಂದ ಸರ್ವಜ್ಞ ॥ ೫ ॥

ಚಿತ್ರವನು ನವಿಲೊಳು ವಿಚಿತ್ರವನು ಗಗನದೊಳು
ಪತ್ರಪುಷ್ಪಗಳ ವಿವಿಧ ವರ್ಣಗಳಿಂದ
ಚಿತ್ರಿಸಿದರಾರು? ಸರ್ವಜ್ಞ ॥ ೬ ॥

ಆನೆ ಕನ್ನಡಿಯಲ್ಲಿ ತಾನಡಗಿ ಇಪ್ಪಂತೆ
ಜ್ಞಾನವುಳ್ಳರ ಹೃದಯದಿ ಪರಶಿವನು
ತಾನಡಗಿ ಇಹನು ಸರ್ವಜ್ಞ ॥ ೭ ॥

ಮಲಯಜದ ಮರದೊಳಗೆ ಸಲೆ ಗಂಧವಿಪ್ಪಂತೆ
ಸುಲಲಿತವಾದಾ ಶರಣರ ಹೃದಯದಿ
ನೆಲೆಸಿಹನು ಶಿವನು ಸರ್ವಜ್ಞ ॥ ೮ ॥

ಕ್ಷೀರದಿ ಘೃತ, ವಿಮಲ ನೀರಿನೊಳು ಶಿಖಿಯಿರ್ದು
ಆರಿಗೂ ತೋರದದರಂತೆ ಎನ್ನೊಳಗೆ
ಸಾರಿಹನು ಶಿವನು ಸರ್ವಜ್ಞ ॥ ೯ ॥

ವಾರಾಣಸಿಗೆ ಹೋದ ಕಾರಣವದೇನಯ್ಯ ?
ತಾರಣಪುರುಷನೊಳಗಿರಲು ಅಲೆವುದಕೆ
ಕಾರಣವ ಕೇಳು ಸರ್ವಜ್ಞ ॥ ೧೦ ॥

ಹರನಾಮ ಕರೆಯದಲೆ, ಪರಶಿವನ ನೆನೆಯದಲೆ
ಸ್ಮರಹರನ ಕರುಣವಿರದಲೆ, ಜಗದೊಳ-
ಗಿರುವದೇ ಕಷ್ಟ ಸರ್ವಜ್ಞ. ॥ ೧೧ ॥

ಎನ್ನ ಮನಸಿಗೆ ನೆನಹ ಪನ್ನಗಧರ ಕೊಟ್ಟ
ಬಿನ್ನಣದಿಂದ ಸ್ತುತಿಗೈದು ಪೊಗಳುವೆ
ಚೆನ್ನಮೂರುತಿಯ ಸರ್ವಜ್ಞ ॥ ೧೨ ॥

—ಸರ್ವಜ್ಞ

—೦—

## ಜಗಕೆ ಅಭಯ ನೀಡು

( ೫ )

ಜಯ ಜಯ ಕಾರುಣ್ಯಾಂಬುಧಿಯೆ
ಜಯ ಜಯ ಮಂಗಲ ಮೂರ್ತಿ ।
ಜಯ ಜಯ ಪಾವನ ಗುಣನಿಧಿಯೆ
ಜಯ ಜಯ ದೇವ ನಮೋಸ್ತು ॥ ೧ ॥

ಕಲಾತೀತನೆ ನಿರ್ಮಲನೆ
ತ್ರೈಲೋಕ್ಯೋಜ್ವಲ ವಾಣಿ ।
ಕೇವಲ ನಿಲಯನೆ ನಿರ್ಭಯನೆ
ಭಾವಿಸು ಭವ್ಯರನೊಲಿದು ॥ ೨ ॥

ಅನ್ನವು ಶಾಸ್ತ್ರವು ಭೈಷಜವು
ಮನ್ನಿಸಿ ಕೊಡುವದು ಮತ್ತೆ ।
ಚನ್ನಾಗಭಯವ ಮಾಡುವದು
ಇನ್ನಾಗಲಿ ಜಗಕೆಲ್ಲ ॥ ೩ ॥

—ಕಲ್ಯಾಣ ಕೀರ್ತಿ

—೮—

## ( ಇ ) ವಚನಗಳು :—

### ನೋಡಿದಲ್ಲೆಲ್ಲ ನೀನೆ !

( ೧ )

ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ !
ಸಕಲವಿಸ್ತಾರದ ರೂಪು ನೀನೇ ದೇವಾ !
ವಿಶ್ವತೋಚಕ್ಷು ನೀನೇ ದೇವಾ !
ವಿಶ್ವತೋಮುಖ ನೀನೇ ದೇವಾ !
ವಿಶ್ವತೋಬಾಹು ನೀನೇ ದೇವಾ !
ವಿಶ್ವತೋಪಾದ ನೀನೇ ದೇವಾ
**ಕೂಡಲಸಂಗಮದೇವಾ**

—೦—

### ಭಾವದ ಮರೆಯ ಬ್ರಹ್ಮ

( ೨ )

ನೆಲದ ಮರೆಯ ನಿಧಾನದಂತೆ,
ಫಲದ ಮರೆಯ ರುಚಿಯಂತೆ,
ಶಿಲೆಯ ಮರೆಯ ಹೇಮದಂತೆ,
ತಿಲದ ಮರೆಯ ತೈಲದಂತೆ,
ಭಾವದ ಮರೆಯ ಬ್ರಹ್ಮನಾಗಿಪ್ಪ
**ಚನ್ನಮಲ್ಲಿಕಾರ್ಜುನ**ನ ನಿಲವನಾರು ಅರಿಯಬಾರದು.

—೦—

### ಮುಗಿಲ ಮರೆಯ ಮಿಂಚು

( ೩ )

ನೆಲದ ಮರೆಯಲಡಗಿರ್ದ ನಿಧಾನದಂತೆ,
ಮುಗಿಲ ಮರೆಯಲಡಗಿರ್ದ ಮಿಂಚಿನಂತೆ,

ಬಯಲ ಮರೆಯಲಡಗಿರ್ದ ಮರೀಚಿಯಂತೆ,
ಕಂಗಳ ಮರೆಯಲಡಗಿರ್ದ ಬೆಳಗಿನಂತೆ
**ಗುಹೇಶ್ವರಾ** ನಿಮ್ಮ ನಿಲವು

—o—

## ಮಣಿಗಳ ಸೂತ್ರ

( ೪ )

ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯ
ಎಣಿಸುವೊಡೆ ತನು ಭಿನ್ನ ಆತ್ಮನೊಬ್ಬನೇ
ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು
ವಣಿವುತಿಪ್ಪೆನಯ್ಯ **ರಾಮನಾಥಾ**

—o—

## ಜಗದಾಧಾರ

( ೫ )

ಶರಧಿಯ ಮೇಲೆ ಧರೆಯು ಕರಗದಂತಿರಿಸಿದೆ
ಅಂಬರಕ್ಕೆ ಗದ್ದುಗೆ ಬೋದುಗೆ ಇಲ್ಲದಂತಿರಿಸಿದೆ
ಎಲೆ ಮೃಡನೇ, ನೀನಲ್ಲದೆ ಉಳಿದ ದೈವಂಗಳಿಗಹುದೇ
**ರಾಮನಾಥಾ**

—o—

## ಅವ್ಯಕ್ತ

( ೬ )

ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ
ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ
ಶರೀರದೊಳಗಾತ್ಮನಾರು ಕಾಣದಂತಿರಿಸಿದೆ
ನೀವು ಬೆರಸಿದ ಭೇದಕೆ ಬೆರಗಾದೆನಯ್ಯ **ರಾಮನಾಥಾ**

—o—

## ಕೂಡಿಯೂ ಕೂಡದವ

( ೭ )

ಈಳ, ನಿಂಬೆ, ಮಾವು, ಮಾದಲಕ್ಕೆ
ಹುಳಿನೀರನೆರೆದವರಾರಯ್ಯ ?
ಕಬ್ಬು, ಬಾಳೆ, ಹಲಸು, ನಾರಿವಾಳಕ್ಕೆ
ಸಿಹಿನೀರನೆರೆದವರಾರಯ್ಯ ?
ಕಳವೆ ಶಾಲಿಗೆ, ಓಗರದ ಉದಕವನೆರೆದವರಾರಯ್ಯ ?
ಮರುಗ, ಮಲ್ಲಿಗೆ, ಪಚ್ಚೆಗೆ,

ಪರಿಮಳದುದಕವನೆರೆದವರಾರಯ್ಯ ?
ಇಂತಿ, ಜಲವು ಒಂದೆ, ನೆಲವು ಒಂದೆ, ಆಕಾಶವು ಒಂದೆ.
ಒಂದೇ ಜಲವು ಹಲವು ದ್ರವ್ಯಂಗಳ ಕೂಡಿ, ತನ್ನ ಪರಿ ಬೇರಾಗಿ
ಹಾಗೆ ಎನ್ನ ದೇವ **ಚನ್ನಮಲ್ಲಿಕಾರ್ಜುನ**ನನು
ಹಲವು ಜಗಂಗಳ ಕೂಡಿಕೊಂಡಿರ್ದರೇನು ?
ತನ್ನ ಪರಿ ಬೇರೆ.

—೦—

## ಆತನ ಲೀಲೆ

( ೮ )

ತನ್ನ ವಿನೋದಕ್ಕೆ ತಾನೆ ಸೃಷ್ಟಿಸಿದ
ಸಕಲ ಪ್ರಪಂಚವನು.
ತನ್ನ ವಿನೋದಕ್ಕೆ ತಾನೆ ತಿರುಗಿಸಿದ
ಅನಂತ ದುಃಖಂಗಳಲಿ.
ಇಂತೆನ್ನ **ಚನ್ನಮಲ್ಲಿಕಾರ್ಜುನ**ದೇವನೆಂಬ ಪರಶಿವನು,
ತನ್ನ ಜಗದ್ವಿಲಾಸ ಸಾಕಾದಡೆ,
ತಾನೆ ಪರಿವನದರ ಮಾಯಾಪಾಶವನು.

—೦—

## ಮನದ ಕೊನೆಯಲ್ಲಿ ನಿಲವು

( ೯ )

ಸಕಲ ವಿಸ್ತಾರದ ರೂಪು ನಿಮ್ಮೊಳಡಗಿತ್ತು
ಎನ್ನ ಮನದಲ್ಲಡಗಿರ್ಪಿರಿ
ಅದೆಂತೆಂದೊಡೆ ಕರಿ ಕನ್ನಡಿಯೊಳಡಗಿರ್ಪಂತೆ
ನೀನು ಭಕ್ತಜನ ಮನೋವಲ್ಲಭನಾದ ಕಾರಣ,
ಎನ್ನ ಮನದ ಕೊನೆಯಲ್ಲಿ
ಅಡಗಿರ್ಪೆಯಯ್ಯ **ಅಖಂಡೇಶ್ವರಾ**

—೦—

## ಜೀವ ನಿಮ್ಮ ದಾನ

( ೧೦ )

ಕಾಯ ನಿಮ್ಮ ದಾನ, ಜೀವ ನಿಮ್ಮ ದಾನ
ಕಾಯ ಜೀವವುಳ್ಳಲ್ಲಿಯೇ ನಿಮ್ಮ ಪೂಜಿಸದ
ನಾಯಿಗಳನೇನೆಂಬೆ ಹೇಳಾ **ರಾಮನಾಥಾ.**

—೦—

ಮನವೆ ಭಕ್ತಿಯ ಮಾಡುತಿಹುದು । ಮತ್ತೆ ।
ಮನವೆ ವಿರಕ್ತಿಯಿಂದೆಲ್ಲ ತೊರೆಯುವದು ।
ಮನವೆ ಸದ್ಗುರುವ ಹೊಂದುತಿಹುದು । ಇಂಥ ।
ಮನವೆ ಮಾನಸಪೂಜೆಯೊಳು ರಮಿಸುವದು
॥ ೧ ॥

ಮನವೆ ಹಠವ ಸಾಧಿಸುವದು । ಒಮ್ಮೆ ।
ಮನವೆ ಯೋಗದಿ ಸಿದ್ಧಿ ಹೊಂದುತ್ತಲಿಹುದು ।
ಮನವೆ ಮಂತ್ರವ ಜಪಿಸುವದು । ಇಂಥ ।
ಮನವೆ ದೈವವ ಸ್ವತಂತ್ರದೊಳಿರಿಸುವದು ॥ ೨ ॥

ಮನವೆ ಮುದ್ರೆಯ ಸಾಧಿಸುವದು । ನಿತ್ಯ ।
ಮನವೆ ತಾರಕಬ್ರಹ್ಮದೊಳು ಬೆರೆಯುವದು ।
ಮನವೆ ಮೌನದಿ ಕೂಡ್ರುವದು । ಇಂಥ ।
ಮನವೆ ಆತ್ಮನ ನೆನೆದಾನಂದಿಸುವದು ॥ ೩ ॥

ಮನವೆ ತತ್ವಗಳರಿಯುವದು । ಮತ್ತೆ ।
ಮನವೆ ಸರ್ವೇಂದ್ರಿಯ ರಾಜನಾಗಿಹುದು ।
ಮನವೆ ಸೂಕ್ಷ್ಮದಿ ಸುಳಿಯುವದು । ಇಂಥ ।
ಮನವೆ ಬ್ರಹ್ಮಾಂಡ ಪಿಂಡಾಂಡವಾಗಿಹುದು ॥ ೪ ॥

ಮನವೆ ಜ್ಞಾನವ ಸಾಧಿಸುವದು । ಖ್ಯಾತಿ ।
ಮನವೆ ಮುಕ್ತಿಯ ರಾಜ್ಯವನ್ನು ಆಳುವದು ।
ಮನವೆ ಬ್ರಹ್ಮನ ಹೊಂದುತಿಹುದು । ಇಂಥ ।
ಮನ **ಗುರುಮಹಲಿಂಗ**ನೊಳಗಿಹುದು ॥ ೫ ॥

—ಶಂಕರಾನಂದ

---

## ಮನವಳಿದರೆ ಆತ್ಮನ ಅರಿವು

**(೬)**

(ರಾಗ—ಕಾಲಿಂಗಡಾ; ಧುಮಾಳಿ ತಾಳ)

ಮನವು ನಾಶವಾಗುವನ್ನ । ಜನಿಸದಾತ್ಮಜ್ಞಾನ ಮುನ್ನ ।
ಮನವನಾಶಗೈದ ಪುರುಷ ಜ್ಞಾನಸಂಪನ್ನ ॥ ॥ ಪ ॥

ನಿರುತನೀರುಕ್ಷೀರೊಂದಾಗಿ । ಬೆರೆತಿರು ಪರಿ ವಾಯು ಮನವು ।
ಎರಡು ಬೆರೆತೊಂದಾಗಿ ಚರಿಸುತಿಪ್ಪವದರಲಿ ॥
ಚರಿಸಲೊಂದು ಬಳಿಕಿನ್ನೊಂದು । ಚರಿಸು ತಿಹುದು ಮತ್ತಿನ್ನೊಂದು ।
ಚರಿಸದಿರಲು, ಸುಮ್ಮನಿರುವವೆರಡು ಒಂದಾಗಿ ॥ ೧ ॥

ವಿನುತಾಷ್ಟಾಂಗಯೋಗದಿ ಸತ್ಯ । ತನುವ ದಂಡಿಸುತ್ತಲೆಷ್ಟು ।
ಹೆಣಗಿದರೂ ವಾಯುಸಾಧ್ಯವಾಗದೆಂದಿಗೂ ।
ಮನವು ನಾಶವಾಗುವದೊಂದೆ । ಕ್ಷಣಕೆ ಸದ್ಗುರು ಕರುಣದಿಂದ ।
ಮನವು ನಶಿಸಿ ಯಮುನಸ್ಕವೆಂದೆನಿಪ್ಪುದೆಂತೆನೆ ॥ ॥ ೨ ॥

ವರ ಮಾನಸ ಸರೋವರದಿ । ಭರದಿ ಮುಳುಗಿದ ವಾಯಸವು ।
ಪರಮಹಂಸನಾಗುವಂತೆ, ಹೀನಮನವಿದು ॥
ಉರುತರಮೃತಕೊಳದಿಯೊಮ್ಮೆ । ಹರುಷದಿಂದ ಮುಳುಗಲಾಗಿ ।
ಪರಮಾತ್ಮನೆಯಾಗಿ ನಿತ್ಯ ಬೆಳಗುತಿಪ್ಪುದು ॥ ॥ ೩ ॥

ನಾನಾ ಪುಷ್ಪಕ್ಕೆರಗುವ ಭ್ರಮರ । ತಾನೆ ಸಂಪಿಗೆ ಪುಷ್ಪಕ್ಕೆರಗಿ ।
ಪ್ರಾಣಬಿಟ್ಟತೆರದಿ, ನಾನಾಕರ್ಮಧರ್ಮದಿ ॥
ತಾನೆ ತಿರುಗುತಿರುವ ಮನವು । ಪೂರ್ಣಬ್ರಹ್ಮದಿ ಮುಳುಗಲಾಗಿ ।
ಹೀನ ವಿಷಯ ಮರೆತು ಮಗ್ನವಾಗುತಿರ್ಪುದು ॥ ॥ ೪ ॥

ಮನವು ನಶಿಸಿ ಪ್ರಾಣೇಂದ್ರಿಯದ
ಗುಣಗಳಳಿದು, ಕೆಡುವದು ಕರ್ಮ
ವಣುಗ । ಸುಪ್ತಿಯಲ್ಲಿ ಕರದ ಪುಷ್ಪದಂತದು ।

ಮನವದಳಿಯಲದ್ವೈತವು
ತನಗೆ ತಾನೆ ಸಿದ್ಧಿಸುವದು
ಅನುಪಮದ್ವಯ **ಗುರುರಂಗನು** ತಾನೆಯಾಗುವ ॥ ॥ ೫ ॥

—ಶಂಕರಾನಂದ

—೦—

# ನಿನ್ನ ಹಿತವನರಿ ಮಾನಸರಾಜನೆ

## (೧೦)

( ರಾಗ—ಶ್ಯಾಮಕಲ್ಯಾಣ—ದ್ವಿಜಾವಂತಿ )

ನಿನ್ನ ಹಿತಕೋಸುಗವೆ ಪೇಳುವೆ ।
ಎನ್ನ ಮಾನಸರಾಜನೇ ॥ ॥ ಪ ॥

ಮುನ್ನ ವಿರಕ್ತಿಯ ಧನವನಾರ್ಜಿಸು ।
ನಿನ್ನದಾಗಿದೆ ಮುಕ್ತಿಯು ॥ ಅ ॥

ಸ್ವಪ್ನದಂದದಿ ರಾಜ್ಯಲಕ್ಷ್ಮಿಯು ।
ಸ್ವಪ್ನದಂದದಿ ಭೋಗವು ।
ಸ್ವಪ್ನದಂದದಿ ಪುತ್ರ ಸತಿಯರು ।
ಸ್ವಪ್ನದಂದದಿ ಪ್ರಾಯವು ॥ ೧ ॥

ದುಃಖಜನ್ಮವು ಮರಣಕಾಲದಿ ।
ದುಃಖಬಹುರೋಗಂಗಳಿಂ ॥
ದುಃಖ ಶತ್ರುಗಳಿಂದಲನುದಿನ ।
ದುಃಖಮಯ ಸಂಸಾರವು । ॥ ೨ ॥

ದುಃಖ ಧನವಾರ್ಜಿಸುವ ಕಾಲದಿ ।
ದುಃಖ ರಕ್ಷಿಪ ಕಾಲದಿ ॥
ದುಃಖ ಚೋರರು ಅಗ್ನಿಭಯ ಬಹು ।
ದುಃಖ ಒಬ್ಬರಿಗೀಯಲು ॥ ॥ ೩ ॥

ನಿತ್ಯವಲ್ಲವು ಹೆಣ್ಣು ಹೊನ್ನುಗಳ್ ।
ನಿತ್ಯವಲ್ಲವು ಮಣ್ಣಿದು ॥
ನಿತ್ಯ ಮೃತ್ಯುವು ಎನಿಸಿ ತ್ರಿಜಗವ ।
ನಿತ್ಯ ನುಂಗುತಲಿರುವದು ॥ ॥ ೪ ॥

ಈಷಣತ್ರಯದಾಸೆಯಿಂದಲಿ ।
ಘಾಸಿಯಾಗುವದೀ ಜಗಂ ॥
ಆಸೆ **ಶ್ರೀಗುರುರಂಗನಲ್ಲಿಡು** ।
ಈಶನಾಗುವೆ ಸಂತತಂ ॥ ॥ ೫ ॥

—ಶಂಕರಾನಂದ

—೦—

## ತಲ್ಲಣಿಸದಿರು, ತಾಳು

## (೧೧)

(ರಾಗ— ಕೇದಾರಗೌಳ; ಝಂಪೆತಾಳ)

ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ಪ ॥

ಬೆಟ್ಟದ ತುದಿಯಲಿ ಪುಟ್ಟಿರುವ ಮರಗಳಿಗೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರು ?
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾಗಿರಲು
ಘಟ್ಯಾಗಿ ಸಲಹುವನು ಇದಕೆ ಸಂಶಯಬೇಡ ॥ ೧ ॥

ಅಡವಿಯೊಳಗಾಡುವ ಮೃಗಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರೊ
ಪಡೆದ ಜನನಿಯ ತೆರದೆ ಸ್ವಾಮಿ ಹೊಣೆಗೀಡಾಗಿ
ಬಿಡದೆ ರಕ್ಷಿಪನಿದಕೆ ಸಂದೇಹಬೇಡ ॥ ೨ ॥

ಕಲ್ಲೊಳಗೆ ಪುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರವಿತ್ತವರು ಯಾರೊ ?
ಬಲ್ಲಿದನು **ಕಾಗಿನೆಲೆಯಾದಿಕೇಶವರಾಯ**
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ೩ ॥

—ಕನಕದಾಸ

—೦—

## ಸತ್ಸಂಗ ಮಾಡಿ ಚಿತ್ಸುಖ ಪಡೆ

### (೧೨)

( ರಾಗ—ಲಾವಣಿ )

ಸತ್ಸಂಗ ಮಾಡೊ ಮನವೆ ಚಿತ್ಸುಖ ನೋಡಲಿಕೆ
ಅತಿಸೂಕ್ಷ್ಮಾನಂದದ ಸುಪಥಾ ।
ಅತ್ಯಾನಂದ ಸದ್ಗತಿ, ಸುಮೋಕ್ಷದಾಯಕ
ಹಿತದೋರಿ ಕೊಡುವ ಸದ್ಗುರುನಾಥ ॥ ಪ ॥

ತೊಡಕಿ ಮಿಡಕ ಬ್ಯಾಡಾ, ಹಡಕಿ ವಿಷಯದೊಳು
ಗಡಕವಾಗಿ ಕಿಡಕ ಬುದ್ಧಿಯಿಂದ ।
ಕೆಡೆದು ಬಡದು ಭವಣೆಬಟ್ಟು, ಮಡದಿ ಮಕ್ಕಳಿಗೆ ದುಡಿದು ತಂದು
ಅಡಕಿದರ ತಾವು ಕೊಡುವರೇನಾ ?

ಒಡಲ ಹೊರಿಯಲಿಕ್ಕೆ ವಡದ-ಮಡಕಿಯಂತೆ ದಣಿಯಲಿಲ್ಲೆ
ತುಡುಕಿ ಹೋಗುತಿಹುದಾಯುಷ್ಯ ಕ್ಷೀಣಾ ।
ನಡಕಹಾಕಿ ವೈರಿ ಯಮನ, ದುಡುಕಿಯೊಳಗಾಗ ಬ್ಯಾಡಾ
ವಡಕೊ ಬ್ಯಾಗ ಗುರುದಯ ಕರುಣಾ ॥ ೧ ॥

ಶಿಲ್ಕಿ ಮಾಯ ಮಲ್ಕಿನೊಳು, ಆಳ್ಕಿ ಆಲ್ಪರಿಯ ಬ್ಯಾಡ
ಬಳ್ಕಿ ಮಾಡಿಕೊಳ್ಳು ನೀ ಸುಜ್ಞಾನ ।
ಕ್ಷುಲ್ಕ ಬುದ್ಧಿಗಾಗಿ, ಆಳ್ಕಿ ಕಲ್ಕಬ್ಯಾಡೊ ನೀನು
ತಿಳ್ಕೊ ನಿನ್ನ ತನುವಿನೊಳಗೆ ಖೂನ ।

ಸುಲ್ಕಿ ಸುಟ್ಟ ಮಲ್ಕಿನಂತೆ, ಜನ್ಮಾಲಂಬ ತೋರಿ ನೀನು
ಜಿಲ್ಕಮುಲದಂತಿರನುದಿನ ।
ನಿಲ್ಕಿ ನೆಲೆಗೊಂಬುದಿದು, ತಳ್ಕು ತನ್ನೊಳ್ಗದೆಯೆಂದು
ನಾಲ್ಕು ವೇದ ಸಾರುತಿದೆ ಪೂರ್ಣ ॥ ೨ ॥

ವ್ಯರ್ಥಗಳಿಯ ಬ್ಯಾಡೊ, ಮರ್ತ್ಯದೊಳ್ಮಾನವ ಜನ್ಮ
ಗುರ್ತು ಮಾಡಿಕೊಳ್ಳೊ ಗುರುವಾದ ।

ನಿರ್ತದಿಂದ ಆರ್ತಕೂಡಿ, ಬೆರ್ತು ಭಾವಭಕ್ತಿಯಿಂದ
ಕರ್ತು ನಿಜಾನಂದ ಗುರುಬೋಧ ।
ಥರ್ಥರದಿ ತೋರಿ ಪೂರ್ಣ, ಸಾರ್ಥಕ ಮಾಡುವದಿದು
ತೀರ್ಥ ಸರ್ವ ಪುಣ್ಯ ಕ್ಷೇತ್ರವಾದ ।
ಅರ್ಥಿಯಿಂದ ಪಿಡಿದು ಗುರು ಮೂರ್ತಿವಾದ ಮಹಿಪತಿ ಹಿ
ತಾರ್ಥ ಪಡೆಯೊ ನಿನ್ನ ಸ್ವಹಿತ ॥ ೩ ॥

—ಮಹಿಪತಿ

—೦—

## ನಾಮ ನೆನೆದು ಸುಖಿಯಾಗು

(೧೩)

(ರಾಗ— ಮುಖಾರಿ ; ಝಂಪೆ ತಾಳ)

ಸಂಸಾರವೆಂಬ ಸಾಗರವನುತ್ತರಿಸುವೊಡೆ
ಕಂಸಾರಿ ನಾಮವೊಂದು ಸಾಕು ಮನವೆ ॥ ಪ ॥

ಯತಿಯಾಗಬೇಡ ನೀ ವೈರಾಗ್ಯವನೆ ಪಿಡಿದು
ವ್ರತವಮಾಡಿದೆನೆಂಬ ಹೆಮ್ಮೆ ಬೇಡ
ಶ್ರುತಿಸ್ಮೃತಿಯ ನೋಡಿದೆನೆಂಬ ಚೇಷ್ಟೆಯು ಬೇಡ
ರತಿಪತಿಪಿತನಾಮವೊಂದೆ ಸಾಕು ಮನವೆ ॥ ೧ ॥

ತನುವ ದಂಡಿಸಿ ತುದಿಯ ಕೋಡುಗಲ್ಲಿನಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ
ಅನುದಿನವು ನೀರೊಳಗೆ ಮುಳುಗಿ ನಡುಗಲು ಬೇಡ
ವನಜನಾಭನ ನಾಮ ನೆನೆ ಕಂಡ್ಯ ಮನವೆ ॥ ೨ ॥

ತೀರ್ಥಯಾತ್ರೆಯ ಮಾಡಿ ಬಹುವಿಧದಿ ಬಳಲಿ ಕೃ-
ತಾರ್ಥನಾದೆನೆಂಬ ಹಮ್ಮು ಬೇಡ,
ಪಾರ್ಥಸಾರಥಿ **ಕಾಗಿನೆಲೆಯಾದಿ ಕೇಶವನ** ಸಂ
ಕೀರ್ತನೆಯ ಮಾಡಿ ಸುಖಿಯಾಗೊ ಮನವೆ ॥ ೩ ॥

—ಕನಕದಾಸ

## ಎಲ್ಲ ಸುಖದುಃಖಗಳಲ್ಲಿ ನೆನವನ್ನು ಮರೆಯದಿರು.

(೧೪)

(ರಾಗ— ಕಲ್ಯಾಣ; ಆಟ ತಾಳ)

ಮಾತು ಮಾತಿಗೆ ಶಂಕರಾ । ಶ್ರೀಗುರುವೆ ಸ- ।
ರ್ವೋತ್ತಮ ನೆನಬಾರದೆ ॥ ಪ ॥

ಜ್ಯೋತಿಸಂಗದಿ ಉರಿದು ಹೋಗುವ ಕರ್ಪುರದಂತೆ ।
ಪಾತಕರಾಶಿಯು ಉರಿದು ಹೋಗುವದಾಗಿ ॥ ಅ ॥

ಸ್ನಾನವ ಮಾಡುವಾಗ । ನೇಮದಿ ಆತ್ಮ-ಧ್ಯಾನವ ಮಾಡುವಾಗ ।
ಜಾಣತನದಿ ಅನ್ನ ಉಂಡು, ಗಂಗಾಮೃತ ।
ಪಾನವ ಮಾಡುವ ಕಾಲದಿ ಮನವೇ ॥೧॥

ಬಿಸಜಾಕ್ಷಿ ನೋಡುವಾಗ । ಕೂಡುತ ನಿತ್ಯ ।ಒಸೆದು ಮಾತಾಡುವಾಗ
ಒಸುರಲಿ ಬಂದ ಸುಮಗನ ಮುದ್ದಿಸುವಾಗ ।
ಹಸನಾದ ವಸ್ತ್ರಂಗಳುಡುವಾಗ ಮನವೇ ॥ ೨ ॥

ಬೆಟ್ಟವನೇರುವಾಗ । ಕಾಲ್ಜಾರಿದಲ್ಲಿ । ಧಟ್ಟನೆ ಬೀಳುವಾಗ।
ಅಷ್ಟಭೋಗದಿ ನಿತ್ಯಲೋಲುಪ್ತಿ ಪಡೆವಾಗ ।
ನಷ್ಟದಾರಿದ್ರ್ಯವು ಬಂದಾಗಲು ಮನವೇ ॥ ೩ ॥

ಸುಲಿವ ಕಳ್ಳನು ಬಂದಾಗ । ಘೋರಾರಣ್ಯ । ದಲಿ ವ್ಯಾಘ್ರ ಹರಿಯುವಾಗ ।
ಛಳಿಜ್ವರ ಕೆಮ್ಮು ಉಬ್ಬಸರೋಗ ಬಂದಾಗ ।
ಮಳೆಗಾಳಿ ಸಿಡಿಲಿನಾರ್ಭಟದಲ್ಲಿ ಮನವೆ . ॥ ೪ ॥

ಗುರುಸೇವೆ ಗೈಯ್ಯುವಾಗ । ಶ್ರೀಗುರುಕೊಟ್ಟ । ಪರಮಂತ್ರ ಜಪಿಸುವಾಗ
ಗುರುವೆ । ಗುರುವೆ । ಕಲ್ಪತರುವೆ । ಪಾಲಿಸು ಎಂದು
**ಗುರುಮಹಾಲಿಂಗನ** ನೆನೆಯಲ್ಲೊ ಮನವೆ ॥ ೫ ॥

—ಶಂಕರಾನಂದ

— o —

## ಅನುಭಾವವಿಲ್ಲದೆ ಆನಂದವಿಲ್ಲ

(೧೫)

(ರಾಗ—ಪಂತುವರಾಳಿ; ಆದಿ ತಾಳ)

ತೋರದು ಸುಖ ಮಾನವನೇಂದ್ರ । ನೀನು ।
ತಾರಕಬ್ರಹ್ಮದಿ ಮುಳುಗದೆ ಸುಮ್ಮನೆ ॥ ಪ ॥

ಹರಿದಾಡುವಿಂದ್ರಿಯಕರಣಗಳನು ಕಟ್ಟಿ
ಅರಿಗಳಾರ್ವರ ನೆಂಟುಮದಗಳ ಶಿರಮೆಟ್ಟಿ ।
ಸ್ಥಿರಕಾಯನಾಗಿ ಚಿತ್ರಾಸನದಲಿ ಕುಳಿತು
ಅರುವಿಂದ ದೃಷ್ಟಿಯ ನಿಲಿಸಿ ನೋಡದೆ ॥ ೧ ॥

ವರ ಗಂಗೆ ಯಮುನೆ ಸಂಗಮದೊಳಗಿಳಿದು
ಪರಿಭವ ಕೋಟಿ ದುಷ್ಕರ್ಮವಂ ತೊಳೆದು ।
ವರ ನೀಲಗಿರಿ ಮಧ್ಯ ದಶನಾದ ತಿಳಿದು
ಪರ ಬಿಂದು ರುಚಿಯೊಳು ನಲಿದು ನೀ ಮುಳುಗದೆ ॥ ೨ ॥

ವರ ಚಂದ್ರ ಸೂರ್ಯ ಬೀದಿಗಳಲ್ಲಿ ತೋರಿ
ಶಿರದೊಳಗಿರುವ ವಟರಂಧ್ರವನೇರಿ ।
ಭರದಿ ಪಶ್ಚಿಮದಲಿ ರಾಜಿಸುತಲಿಪ್ಪ
ವರ ಮೋಕ್ಷಾಂಗನೆ ಕೂಡಿ ಆನಂದ ಪಡೆಯದೆ ॥ ೩ ॥

ಅನುದಿನವಾಮೋಕ್ಷಕಾಂತೆಯ ಕೂಡುತ್ತ
ಕ್ಷಣಿಕವೀ ಸಂಸಾರವೆಂದನುಭವಿಸುತ್ತ ।
ಜನನ ಮರಣವೆಂಬ ಎರಡನ್ನು ತೊಳೆಯುತ್ತ
ಅನುಪಮಾದ್ವಯ ಬ್ರಹ್ಮಚಿಂತನೆಗೈಯದೆ ॥ ೪ ॥

ದೇಹವಾನೆಂಬುವ ಭ್ರಾಂತಿಯ ನೀಗಿ
ಸೋಹಂಭಾವದಿ ಚಿತ್ತ ನಿಶ್ಚಲವಾಗಿ ।
ಮೋಹಮತ್ಸರ ಪಾಶಗಳು ಉರಿದ್ಹೋಗಿ
ಮೋಹರಹಿತ ಗುರುರಂಗನೊಳ್ಬೆರೆಯದೆ ॥ ೫ ॥

—ಶಂಕರಾನಂದ

## (ಆ) ಪದ್ಯಗಳು :—

### ಆತ್ಮದೇವನನೊಲಿಸು

### (೬)

ಎಲೆ ಮನವೆ ! ಹಿಂದೆ ನೀ
ನಿಂದ್ಯ ಯೋನಿಗಳಲ್ಲಿ
ಹಾಳು ಬಾಳನು ಬಾಳಿ ದಣಿದಿ, ದಣಿದಿ ।
ಚೆಲುವ ಆತುಮನನ್ನು
ಒಲವಿನಿಂದರಿಯದಲೆ
ಮನಬಂದ ತೆರದಿ ನೀ ಕುಣಿದಿ, ಕುಣಿದಿ ॥ ೧ ॥

ಅಶನ ವ್ಯಸನಗಳಲ್ಲಿ
ನಿದ್ರೆಯಲಸಿಕೆಯಲ್ಲಿ
ಮಡದಿಯೊಡೆಯಲಿ ಕಾಲ ಕಳದಿ, ಕಳದಿ ।
ಹೇಸಿ ನಡೆಯಿಂ ಧನದ
ರಾಶಿಗಳ ಮೇಳವಿಸಿ
ಜನನ ಮರಣಗಳನ್ನು ತಳೆದಿ ತಳೆದಿ ॥ ೨ ॥

ಇನ್ನಾದರಾರಯ್ದು,
ಗುಣಗಳೊಡನೆಯೆ ಕಾದು
ಹಿರಿಗುರುಗಳಿಗೆ ಹೋಗು ಶರಣು, ಶರಣು ।
ಚೆನ್ನ ನಡೆಯನ್ನು ಗಳಿಸು
ಆತ್ಮದೇವನನೊಲಿಸು
ಭವದ ತಿರುಗಣಿಗೆನ್ನು ಶರಣು ಶರಣು ॥ ೩ ॥

—ನಿಂಬರಗಿ ಮಹಾರಾಜ

—೦—

## ಅರಿತು ಗುರಿವಿಗೆರಗು

### (೭)

ಏಳುತೆದ್ದು ಮನವೆ ನೀ ಒಲಿಸಿ ನಿಜ ಖೂನ
ಕುಲಕೋಟಿ ಉದ್ಧರಿಸುವ ನೆಲೆ ನಿಜಸ್ಥಾನ
ಬೆಳಗಾಗಲಿಕ್ಕೇರಿತು ನೀ ಒಳಿತಾಗಿ ಪೂರ್ಣ
ತಿಳಕೊಂಡು ಮಾಡು ಗುರುಮೂರ್ತಿಗೆ ನಮನ ॥ ೧ ॥

ಒಳಮುಖನಾಗರಿಯೊ ನೀ ಸುಲಲಿತ ಜ್ಞಾನ
ಆಲಸ್ಯಮಾಡದೆ ನೀ ಬ್ಯಾಗ ಒಲಿಸು ನಿಜಧ್ಯಾನ ।
ಧಳಧಳಗುಡುತಲ್ಯದ ಒಳಿತಾಗಿ ಪೂರ್ಣ
ತಿಳಕೊಂಡು ಮಾಡು ಗುರುಮೂರ್ತಿಗೆ ನಮನ ॥ ೨ ॥

ತುಳಿಬೇಕೆಲೊ ಮನವೇ ! ಮಲಿನ ಗುಣ
ಕಳಿಬೇಕು ನೋಡಳಿದು ಕರ್ಮತಮಂ ಘನ ।
ಕಳೆಕಾಂತಿಯುಳ್ಳ ಕರುಣಾರ್ಣವ ಸ್ವಾಮಿ ಪೂರ್ಣ
ತಿಳಿಕೊಂಡು ಮಾಡು ಗುರುಮೂರ್ತಿಗೆ ನಮನ ॥ ೩ ॥

ಸಲಿ ಮೊರೆಹೊಕ್ಕು ನೀ ಸದಾ ಒಲಿಸು ಭಕ್ತಿಪೂರ್ಣ
ನೆಲೆಕೊಂಡಿರೊ ಅನುದಿನ ಸದ್ವಸ್ತು ಶರಣ
ಸಕಳ ಸುರವುತಲ್ಯದ ಬಲ್ಲ ಸ್ವಾಮಿಕರುಣ
ತಿಳಕೊಂಡು ಮಾಡು ಗುರುಮೂರ್ತಿಗೆ ನಮನ ॥ ೪ ॥

ಇಳೆಯೊಳಿದೇ ಸಕಳ ಪುಣ್ಯ ಶಿರೋ ನಿಧಾನ
ಫಳಿಸುವದೊಂದೆ ಸುಫಳಿತ ಸುದಿವ್ಯ ಘನ ।
ತಿಳಿಯೊ ಸುಮನವೆ **ಮಹಿಪತಿ** ಸ್ವಾಮಿಪೂರ್ಣ
ಒಲುವ್ಹಾಂಗೆ ಮಾಡು ಗುರುಮೂರ್ತಿಗೆ ನಮನ ॥ ೫ ॥

—ಮಹಿಪತಿ

—೦—

## ವಿಷಯವನ ತೊರೆದು ಆತ್ಮನ ಭಾವಿಸು

(೮)

ಚೆನ್ನನೆ ನಿನ್ನಿಂದೀ ಕೊಳೆಯೊಡಲು
ಮನ್ನಿಸಿಕೊಂಬದು ಕೇಳು ।
ಇನ್ನೀ ಜಗದೊಳು ತೀರ್ಥವನು
ಸನ್ನುತ ಶೀಲದಿ ಮಾಡು ॥ ೧ ॥

ಲಕ್ಷಿತ ಚತುರಾಶೀತಿಗಳ
ಲಕ್ಷದ ಭವದೊಳು ಬಂದು।
ವೀಕ್ಷಿಸಿ ಭಾವಿಸಿ ಜಲಧಿಗತ
ಪಕ್ಷಿಯ ಪರಿಯಂತಾದಿ ॥ ೨ ॥

ಸುರನರ ಪತಿಗಳ ಸಂಪದವು
ಪರಿಪರಿಯಂಗದ ಕಾಂತಿ ।
ತರುಣಾಯುಷ್ಯದ ನಿತ್ಯತೆಯು
ಸುರಪತಿ ಕಾರ್ಮುಕದಂತೆ ॥ ೩ ॥

ಕೆಡದಿರು ಕೆಡದಿರು ಜೀವವೆ ನೀನು
ಒಡಲೊಳು ಜಡಮತಿಯಾಗಿ ।
ಮಡಗದಿರಂತಃಕರಣವನು
ಪಡೆದಮಲಾತ್ಮನೇ ಬಿಟ್ಟು ॥ ೪ ॥

ಭಾವಿಸು ನಿನ್ನನು ನಿನ್ನೊಳಗೆ
ಜೀವದಯಾಪರನಾಗಿ
ಕೇವಲ ದರ್ಶನ ಜ್ಞಾನಗಳು
ಭಾವನೆ ಇಲ್ಲದೊಡಿಲ್ಲ ॥ ೫ ॥

ಹವಣಿಸಲರಿಯದೆ ನಿನ್ನೊಳಗೆ
ಭವಭವದೊಳು ನೀ ನೊಂದೆ

ಅವಗತನಾಗು ನಿಜಾತ್ಮನೊಳು
ಭವಗಳು ಕೆಡುವವು ಮುಂದೆ ॥ ೬ ॥

ಕರೆವಾನಂದದ ಕಡಲೊಳಗೆ
ನೆರೆ ಮುಳುಗೀಸಾಡಿ ಮಿಂದು ।
ಮರೆವುದು ವಿಷಯ ಸುಖಂಗಳನು
ಬರಿದೆ ನೀ ಬಳಲದರಿನ್ನು ॥ ೭ ॥

ತರುಗಳ ಕಿಡಿಗಳು ದವಶಿಖಿಯು
ಕರಕನು ಮಾಡುವವಂತೆ।
ನಿರಘನ ನೆನೆದಡೆ ದಹಿಸುವವನು
ದುರಿತವನಾಕ್ಷಣದಲ್ಲಿ ॥ ೮ ॥

ನೋಮದಿವಾಕರ ಕೋಟಿಗಳ
ಧಾಮವ ವಿಮುಖವ ಮಾಡಿ
ಪ್ರೇಮದಿ ಮೆರೆವ ಜಿನೇಶ್ವರರ
ನಾಮಸ್ಮರಣೆ ಮಾಡಿ ॥ ೯ ॥

ಅನುಪಮ ಮಂಗಲ ಗುಣನಿಧಿಯ
ಮನದೊಳು ಭಾವಿಸಿ ಮೆಚ್ಚಿ ।
ಜನನುತ ಮಂಗಳ ವಸ್ತುಗಳಿಂ
ನೆನೆದರ್ಚನೆಯನು ಮಾಡು ॥ ೧ ॥

—ಕಲ್ಯಾಣಕೀರ್ತಿ

—೦—

## ಸಂಸಾರ ವನೆಚ್ಚದೆ ಶೂಲಿಯ ನೆನೆ
(೯)

ನೀರಬೊಬ್ಬುಳಿ ನಚ್ಚಿ ಸಾರಿ ಕೆಡದಿರು ಮರುಳೆ ।
ಸಾರಗುಣಿಯಾಗು ! ನಿಜಶಿಳಿ ! ನರುವರೊಳು ।
ಕಾರಣಿಕನಾಗು ಸರ್ವಜ್ಞ ॥ ೧ ॥

ಉರಗನ ಮುಖದಿ ಸಿಕ್ಕಿರುತಿಪ್ಪ ಕಪ್ಪೆ ತಾ ।
ಎರಗುವ ನೊಣಕೆ ಹರಿದಂತ ಸಂಸಾರ
ದಿರವು ಕಾಣಯ್ಯ ಸರ್ವಜ್ಞ ॥ ೨ ॥

ಮೃತ್ಯುದೇವತೆಯತ್ತಿ ಹೊತ್ತು ತಾನಾಡಿಸುತ ।
ತುತ್ತು ಇದ್ದಲ್ಲಿ ವೈದುಣಿಸಿ ಕಡೆಯಲ್ಲಿ ನೀ ।
ಹೊತ್ತು ಚಲ್ಲುವಳು ಸರ್ವಜ್ಞ ॥ ೩ ॥

ಬಾಲ್ಯಯೌವನದೊಳಗೆ ಲೋಲುಪನಾಗಿ ।
ನೇಳುತಲಿ ಮನಿಸುತಿರಬೇಡ । ಅನುದಿನ ।
ಶೂಲಿಯನು ನೆನೆಯೊ । ಸರ್ವಜ್ಞ ॥ ೪ ॥

ಕಣ್ಣು ನಾಲಿಗೆ ಮನವ ಪನ್ನಗಧರಕೊಟ್ಟ ।
ಚನ್ನಾಗಿ ಮನವ ತೆರೆದು ಬಿಡದೆ ಶ್ರೀ ।
ಚನ್ನನ ನೆನೆಯೊ । ಸರ್ವಜ್ಞ ॥ ೫ ॥

—ಸರ್ವಜ್ಞ

—೦—

## (ಇ) ವಚನಗಳು

### ಹಲ ಬಗೆಯ ಹಂಬಲ ಬಿಡು

( ೧೧ )

ಬೆಲ್ಲವ ತಿಂದ ಕೋಡಗನಂತೆ,
ಸಿಹಿಯ ನೆನೆಯದಿರಾ ಮನವೇ !
ಕಬ್ಬ ತಿಂದ ನರಿಯಂತೆ,
ಹಿಂದಕ್ಕೆಳಸದಿರಾ ಮನವೇ !
ಗಗನವನಡರಿದ ಕಾಗೆಯಂತೆ,
ದೆಸೆದೆಸೆಗೆ ಹಂಬಲಿಸದಿರಾ ಮನವೇ !
**ಕೂಡಲ ಸಂಗನ** ಶರಣರ ಕಂಡು
ಲಿಂಗವೆಂದು ನಂಬು ಮನವೇ

—o—

### ಶರಣರ ಕಿಂಕರನಾಗು

( ೧೨ )

ಒಡೆಯನ ಕಂಡರೆ, ಕಳ್ಳನಾಗದಿರಾ ಮನವೇ !
ಭವದ ಬಾಧೆಯ ತಪ್ಪಿಸಿಕೊಂಬರೆ,
ನೀನು ನಿಯತವಾಗಿ, ಭಯ ಭರಿತನಾಗಿ,
ಅಹಂಕಾರಿಯಾಗದೆ ಶರಣೆನ್ನು ಮನವೇ !
**ಕೂಡಲ ಸಂಗನ** ಶರಣರಲ್ಲಿ ಭಕ್ತಿಯ ನೂಸುವರೆ,
ಕಿಂಕರನಾಗಿ ಬದುಕು ಮನವೇ !

—o—

### ದೇವರನ್ನು ಹಿಂಬಾಲಿಸು

( ೧೩ )

ನಿನ್ನ ಜನ್ಮದ ಪರಿಭವವ ಮರೆದೆಯಲ್ಲಾ ಮನವೇ !
ಲಿಂಗವ ನಂಬು ಕಂಡಾ ಮನವೇ ।

ಜಂಗಮವ ನಂಬು ಕಂಡಾ ಮನವೇ ।
**ಕೂಡಲ ಸಂಗಮ** ದೇವರ ಬಿಡದೆ,
ಬೆಂಬತ್ತು ಕಂಡಾ ಮನವೇ ।

—o—

### ಕೊಟ್ಟು ಕುದಿಯದಿರು

( ೧೪ )

ಆಡಿ ಅಳುಪದಿರಾ; ಲೇತ್ರಮಾಡಿ ಮರುಗದಿರಾ !
ಎಲೆ ಮನವೇ ! ಕೂಡಿ ತಪ್ಪದಿರಾ,
ಬೇಡಿದವರಿಗೆ ಇಲ್ಲೆನ್ನದಿರಾ ಕಂಡ್ಯಾ !
ನಾಡಮಾತು ಬೇಡ, ಸೆರಗೊಡ್ಡಿ ಬೇಡು,
**ಕೂಡಲ ಸಂಗನ** ಶರಣರ !

—o—

### ದೇವನನ್ನಲ್ಲದೆ ಯಾರನ್ನೂ ಬೇಡದಿರು

( ೧೫ )

ಸುರರ ಬೇಡಿದರಿಲ್ಲ, ನರರ ಬೇಡಿದರಿಲ್ಲ ।
ಬರಿದೆ ಧೃತಿಗೆಡಬೇಡ ಮನವೇ ।
ಆರನಾದಡೆಯೂ ಬೇಡಿ ಬೇಡಿ,
ಬರಿದೆ ಧೃತಿಗೆಡಬೇಡ ಮನವೇ ।
**ಕೂಡಲ ಸಂಗಮ** ದೇವನಲ್ಲದೆ,
ಆರ ಬೇಡಿದರಿಲ್ಲ ಮನವೇ ।

—o—

### ಕೊಡುವವನು, ಒಯ್ಯುವವನು ಹರನೇ

( ೧೬ )

ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬಕ್ಕು
ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯ

ನೆರೆಯದ ವಸ್ತು ನೆರೆವುದು ನೋಡಯ್ಯ
ಅರಸು ಪರಿವಾರ ಕೈವಾರ ನೋಡಯ್ಯ
ಪರಮ ನಿರಂಜನನು ಮರೆವ ಕಾಲಕ್ಕೆ
ತುಂಬಿದ ಹರವಿಯ ಕಲ್ಲು ಕೊಂಡಂತೆ **ಕೂಡಲ ಸಂಗಮದೇವಾ**

—o—

## ಸಿರಿಯ ನೆಚ್ಚಿ ಕೆಡದಿರು

( ೧೭ )

ಸಂಸಾರವೆಂಬುದೊಂದು ಗಾಳಿಯ ಸೊಡರು
ಸಿರಿಯೆಂಬುದೊಂದು ಸಂತೆಯ ಮಂದಿ ಕಂಡೈಯ್ಯ
ಇದ ನೆಚ್ಚಿ ಕೆಡಬೇಡ, ಸಿರಿಯೆಂಬುದ
ಮರೆಯದೆ ಪೂಜಿಸು ನಮ್ಮ **ಕೂಡಲ ಸಂಗಮ ದೇವನ**

—o—

## ಮುಪ್ಪು ಸಾವಿನ ಮುನ್ನ ದೇವನನ್ನು ಭಜಿಸು

( ೧೮ )

ನೆರೆ ಕೆನ್ನೆಗೆ, ತೆರೆ ಗಲ್ಲಕ್ಕೆ,
ಶರೀರ ಗೂಡುವೋಗದ ಮುನ್ನ
ಹಲ್ಲು ಹೋಗಿ, ಬೆನ್ನು ಬಾಗಿ
ಅನ್ಯರಿಗೆ ಹಂಗಾಗದ ಮುನ್ನ,
ಕಾಲ ಮೇಲೆ ಕೈಯ್ಯನೂರಿ,
ಕೋಲ ಹಿಡಿಯದ ಮುನ್ನ,
ಮುಪ್ಪಿಂದ ಒಪ್ಪವಳಿಯ ಮುನ್ನ
ಮೃತ್ಯು ಮುಟ್ಟದ ಮುನ್ನ,
ಪೂಜಿಸು **ಕೂಡಲ ಸಂಗಮ ದೇವನ**

—o—

## ನಿಜವ ನಿಶ್ಚಯಿಸು

( ೧೯ )

ಎಲೆ ಮನವೇ, ನಿನ್ನ ನಿಜವ ತಿಳಿವದೆ,
ಆ ನಿನ್ನ ನಿಜವ ಹೇಳುವೆ
ಅದು ಕೇವಲ ಜ್ಯೋತಿ ಅದು ವರ್ಣನಾತೀತ
ನೀನದನರಸುವಾಗ ನಿನಗಾವಲ್ಲಿ ನಿಶ್ಚಯ ತೋರಿತ್ತು
ಅದೀಗ ನಿನ್ನ ಪರಿಪೂರ್ಣತ್ವದ ನೆಲೆ
ಆ ನಿನ್ನ ನಿಜವ ನಿಶ್ಚೈಸಿ ನಿರ್ಗಮನಿಯಾದಲ್ಲಿ,
ಅದೇ ಸಮ್ಯಕ್ ಜ್ಞಾನದ ತೋರಿಕೆ
ಆ ತೋರಿಕೆಯ ಅಖಂಡ ಬೆಳಗಿನೊಳಗೆ
ನೀ ನಿಮ್ಮ **ಗುಹೇಶ್ವರ** ಲಿಂಗನ ಚರಣವ
ನರಸಿಕೊಂಡು ನಿಶ್ಚಿಂತನಾಗೆಲೆ ಮನವೇ !

— ೦ —

## ತಾನೆ ತೋರುವ ಅಖಂಡ ಬೆಳಕೇ ನಿಜ

( ೨೦ )

ಎಲೆ ಮನವೇ ! ಎಲ್ಲಿ ಹವಣಿಸಬಾರದ ಅಖಂಡ ಬೆಳಗು
ತೋರುತ್ತಿಹುದು ಅದೀಗ ನಿನ್ನ ನಿಜ.
ಎಲೆ ಮನವೇ ! ಆವಲ್ಲಿ ನೀನೆಂಬ ಸೆರೆ ಹಿಂಗಿ
ತಾನೆ ತೋರುತ್ತಿಹುದು, ಅದೀಗ ನಿನ್ನ ನಿಜ.
ಎಲೆ ಮನವೇ ! ನಿನ್ನ ನಿಜವನರಿಯಬಲ್ಲದೆ,
ಅದೇ ಬ್ರಹ್ಮಜ್ಞಾನ ಅದೇ ಕೇವಲ ಮುಕ್ತಿ;
ಅದೇ ನಮ್ಮ **ಗುಹೇಶ್ವರ ಲಿಂಗ**ದನರಿವ
ಸಹಜಭಕ್ತಿಯ ಕುಳ ಕಾಣಾ
ಎಲೆ ಮನವೇ ! ನೀನದ ನಿಶ್ಚಯಿಸಿಕೋ ಮರೆಯದೆ.

— ೦ —

# ಮಕರಂದ

ಸ್ವದೇಹಮಾದ್ಯಂ ಸುಲಭಂ ಸುದುರ್ಲಭಂ
ಪ್ಲವಂ ಸುಕಲ್ಪಂ ಗುರುಕರ್ಣಧಾರಂ ।
ಮಯಾನುಕೂಲೇನ ನಭಸ್ವತೇರಿತಂ
ಪುಮಾನ್ಭವಾಬ್ಧಿಂ ನ ತರೇತ್ಸ ಆತ್ಮಹಾ ॥ ೧ ॥

—ಶ್ರೀ ಭಾಗವತ

ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ
ಸಮ್ಯಗ್ ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ ॥ ೨ ॥

—ಮಾಂಡುಕ್ಯ

ಸತ್ಯಾನ್ನ ಪ್ರಮದಿತವ್ಯಂ
ಧರ್ಮಾನ್ನ ಪ್ರಮದಿತವ್ಯಂ ।
ಕುಶಲಾನ್ನ ಪ್ರಮದಿತವ್ಯಂ
ಭೂತ್ಯೈ ನ ಪ್ರಮದಿತವ್ಯಂ ॥ ೩ ॥

—ತೈತ್ತಿರೀಯ

ಪ್ರತ್ಯಹಂ ಪ್ರತ್ಯವೇಕ್ಷೇತ
ನರಶ್ಚರಿತಮಾತ್ಮನಃ ।
ಕಿನ್ನು ಮೇ ಪಶುಭಿಸ್ತುಲ್ಯಂ
ಕಿನ್ನು ಸತ್ಪುರುಷೈರಿತಿ ॥ ೪ ॥

— ೧೬ —

## ದಾಳಿ ಬಾರದ ಮುನ್ನ ಧರ್ಮವ ಕೈಕೊಳ್ಳಿ

(ರಾಗ—ಭೈರವಿ ದೀಪ ಚಂದಿ ತಾಳ)

ಮಾನವಾ ಜನ್ಮ ದೊಡ್ಡದು ॥ ಪ ॥
ಹಾನಿ ಮಾಡಬೇಡಿ ಹುಚ್ಚಪ್ಪಗಳಿರಾ ॥ ಅ ॥

ಕಣ್ಣು ಕೈಕಾಲು ಕಿವಿ ನಾಲಿಗೆಯಿರಲಿಕ್ಕೆ
ಮಣ್ಣು ಮುಕ್ಕಿ ಮರುಳಾಗುವರೇ !
ಹೊನ್ನು ಹೆಣ್ಣಿಗೆ ಮೆಚ್ಚಿ ಹರಿನಾಮಾಮೃತ
ಉಣ್ಣದೆ ಉಪವಾಸ ಮಾಡುವರೇ ॥ ೧ ॥

ಕಾಲನ ದೂತರು ಕರಪಿಡಿದೆಳೆಯುವಾಗ
ತಾಳು ತಾಳೆಂದರೆ ತಾಳುವರೆ !
ದಾಳಿ ಬಾರದ ಮುನ್ನ ಧರ್ಮವ ಕೈಕೊಳ್ಳಿ
ಸುಳ್ಳಲ್ಲೊ ಸಂಸಾರ ಸುಳಿಗಾಳಿಯಂತೆ ॥ ೨ ॥

ಏನು ಕಾರಣ ನಮ್ಮ ಯದುಪತಿಯ ಮರೆತಿರಿ
ಧನಧಾನ್ಯ ಪುತ್ರರು ಕಾಯುವರೇ !
ಇನ್ನು ಆದರು ಏಕೋಭಾವದಿ ಪೂಜಿಸಿ
ಉನ್ನತ **ಪುರಂದರ ವಿಠಲನ** ಭಜಿಸಿರಿ ॥ ೩ ॥

—ಪುರಂದರದಾಸ

—೦—

— ೧೭ —

## ಪರರ ಹೆಣ್ಣು, ಹೊನ್ನು, ಮಣ್ಣು ಬಯಸಬೇಡ

(ರಾಗ— ಸಾರಂಗ, ದಾದರಾ ತಾಳ)

ಹೆಣ್ಣು ಹೊನ್ನು ಮಣ್ಣುಗಳನು
ಬಯಸಿ ಬಯಸಿ ಬಳಲದಿರ್ಕೆ ॥ ಪ ॥

ಚೆನ್ನ ದೇವ ನೀಡಿದುದನು
ಬಳಸಿ ಬಳಸಿ ಬೆಳೆಯುತಿರ್ಕೈ ॥ ಅ ॥

ತನ್ನ ಹೊನ್ನನಲ್ಲಗಳೆದು
ಅನ್ಯರದನು ಬೇಡದಿರ್ಕೈ ।
ತನ್ನ ಹೆಣ್ಣನುಳಿದನ್ಯರ
ಕಣ್ಣನೆತ್ತಿ ನೋಡದಿರ್ಕೈ ॥ ೧ ॥

ಪರರ ಧನವು ನರಕ ಬಗೆದು
ಮನದ ಮಲಿನ ಕಳೆಯುತಿರ್ಕೈ ।
ಪರರ ನಾರಿ ತನಗೆ ಮಾರಿ
ಮನದಿ ಸತತ ತಿಳಿಯುತಿರ್ಕೈ ॥ ೨ ॥

ಹೆಣ್ಣು ಹೊನ್ನು ವೈರಿಗಳಿಗೆ
ಮಣಿದು ಮಣಿದು ನಡೆಯದಿರ್ಕೈ ।
ಸಲಿಗೆಯಿಂದ ಸುಲಿಗೆಮಾಡಿ
ಹಣಿದು ಹಣಿದು ಬಿಡುತಿಹವೈ ॥ ೩ ॥

ಮನದ ಬಯಕೆ ತಡೆಯಲಾರೆ
ಜನಕೆ ಬಾಯ ತೆರೆಯದಿರ್ಕೈ ।
**ಆತ್ಮದೇವ** ನೆಡೆಗೆ ಸಾರಿ
ಎಲ್ಲವನು ಪಡೆಯುತಿರ್ಕೈ ॥ ೪ ॥

—ನಿಂಬರಗಿ ಮಹಾರಾಜ

—೦—

— ೧೮ —

## ನಾಳೆಯೆಂಬವನ ಮನೆ ಹಾಳು

(ರಾಗ— ಸಾಳಂಗ ಅಟತಾಳ)

ನಾಳೆಯೆಂಬವನ ಮನೆ ಹಾಳು । ನೀನು ।
ನಾಳೆತನಕಿರುವದು ನಿಜವೇನು ಹೇಳು ॥ ಪ ॥

ಕ್ಷಣಭಂಗುರವೆನ್ನಿಸಿದೆ। ನಿನ್ನ।
ತನುವು ಆಚಂದ್ರಾರ್ಕವಾಗಿ ನಿಲ್ಲುವದೇ!
ದಿನದಿ ರೋಗದಿ ಸಾಯುತಿದೆ। ಇದನು।
ಮನದೊಳಗರಿತು ಶೀಘ್ರದಿ ಮುಕ್ತನಾಗು ॥೧॥

ಹಾಳು ವಾದ ಮಾಡಬಲ್ಲೆ। ನಿನ್ನ।
ಮೂಲ ತತ್ವವ ಕಿವಿಯೊಳಗೊಲ್ಲೆ।
ಖೂಳ ಕುಹಕ ವಿದ್ಯೆ ಬಲ್ಲೆ। ಎಷ್ಟು।
ಹೇಳಿಯೂ ಆಶೆ ಮೋಹವ ಬಿಡಲೊಲ್ಲೆ ॥೨॥

ಕೊಡಬೇಕಾದರೆ ನಾಳೆಯೆಂಬೆ। ಕಟ್ಟಿ।
ಇಡಬೇಕಾದರೆ ಯೆನ್ನದೀಗಲೆ ಯೆಂಬೆ।
ಮಡದಿ ಮಕ್ಕಳಿಗಿರಲೆಂಬೆ। ನಾಳೆ।
ಜಡಿಯುವ ಯಮಭಟರುಗಳಿಗೇನೆಂಬೆ ॥೩॥

ಬರುವಕಾಲಕ ಬರಿಗೈಯ್ಯಿ। ನೀನು।
ಪೊರಡುವ ಕಾಲದೊಳಗೆ ಬರಿಗೈಯ್ಯಿ।
ಪರರನ್ನು ಜರಿಯುವ ಬಾಯಿ। ಇದು।
ವರ ಕಾಣದಾಡುವ ತಲೆಹುಳಿತ ನಾಯಿ ॥೪॥

ವಿರತಿ ಸದ್ಭಕ್ತಿಯ ತಾಳು। ಕೆಟ್ಟ।
ದುರಿತದಿ ಕುದಿಯುವದ್ಯಾತರ ಬಾಳು?
ಸ್ಥಿರಮುಕ್ತಿಕಾಂತೆಯನಾಳು। ನಮ್ಮ।
**ಗುರುಮಹಾಲಿಂಗನ** ವಚನವ ಕೇಳು ॥೫॥

—ಶಂಕರಾನಂದ

—೦—

— ೧೯ —

## ಪ್ರತಿನಿತ್ಯ ಮನವ ಶೋಧಿಸು

(ರಾಗ— ನಾದ ನಾಮಕ್ರಿಯಾ ಛಾಪು ತಾಳ)

ಮನವ ಶೋಧಿಸಬೇಕು ನಿತ್ಯಾ, ದಿನ
ದಿನದಿ ಮಾಡುವ ಪಾಪಪುಣ್ಯದ ವೆಚ್ಚಾ ॥ ಪ ॥

ಧರ್ಮ ಅಧರ್ಮ ವಿಂಗಡಿಸಿ, ಅ-
ಧರ್ಮದ ನರಗಳ ಬೇರ ಕತ್ತರಿಸಿ ।
ನಿರ್ಮಲಾಚಾರದಿ ಬೆರಸಿ, ವರ-
ಬರ್ಮಮೂರುತಿ ಪಾದಕಮಲವ ಭಜಿಸಿ ॥ ೧ ॥

ಮನವ ಖಂಡಿಸಿ ಒಮ್ಮೆ ಮಾಣೋ, ನಿನ್ನ
ತನುವ ದಂಡಿಸಿ ಪರಮಾತ್ಮನ ಕಾಣೋ
ಕೊನೆಗೆ ನಿನ್ನೊಳಗೆ ನೀ ಜಾಣೋ, ಮುಕ್ತಿ
ನಿನಗೆ ದೂರಿಲ್ಲವೊ ಒಂದೇ ಗೇಣೋ ॥ ೨ ॥

ಆತನವರಿಗೆ ಕೇಡಿಲ್ಲ, ಅವ
ಪಾತಕ ಪತಿತ ಸಂಗವ ಮಾಡ್ವನಲ್ಲ ।
ನೀತಿವಂತರು ಕೇಳಿರೆಲ್ಲ ನಮ
ಗಾತನೆ ಗತಿ ಈವ **ಪುರಂದರ ವಿಠಲ** ॥ ೩ ॥

—ಪುರಂದರದಾಸ

—೦—

— ೨೦ —

## ಉದರ ವೈರಾಗ್ಯ ಬೇಡ

(ರಾಗ—ಪೂರ್ವಿ ಆದಿತಾಳ)

ಉದರವೈರಾಗ್ಯವಿದು । ನಮ್ಮ
ಪದುಮನಾಭನಲಿ ಲೇಶಭಕುತಿಯಿಲ್ಲ ॥ ಪ ॥

ಉದಯಕಾಲದಲೆದ್ದು ಗದಗದ ನಡುಗುತ ।
ನದಿಯೊಳು ಮಿಂದೆವೆಂದ್ಹೇಳುತಲಿ ॥
ಮದ ಮತ್ಸರ ಮೋಹ ಒಳಗೆ ತುಂಬಿಟ್ಟುಕೊಂಡು ।
ಬದಿಯಲಿದ್ದವರಿಗಾಶ್ಚರ್ಯ ತೋರುವುದು ॥ ೧ ॥

ಕಂಚುಗಾರರಾ ಅಂಗಡಿಯಂದದಿ ।
ಕಂಚು ಹಿತ್ತಾಳಿಯ ಪ್ರತಿಮೆಯ ನೆರಹಿ ॥
ಮಿಂಚಲೆನುತ ಬಹು ಜ್ಯೋತಿಗಳನೆ ಹಚ್ಚಿ ।
ವಂಚನೆಯಲಿ ಘನ ಪೂಜೆ ಮಾಡುವದು ॥ ೨ ॥

ಕರದೊಳು ಜಪಮಣಿ ಬಾಯೊಳು ಮಂತ್ರವು ।
ಅರಿವೆಯ ಮುಸುಕನು ಮೋರೆಗೆ ಹಾಕಿ ॥
ಪರಸತಿ ಪರಧನಕಾಗಿ ಚಿಂತಿಸುತೆ ।
ವರಮ ವೈರಾಗ್ಯದ ಮೂರ್ತಿಯೆನಿಸುವನು ॥ ೩ ॥

ಬೂಟಕತನದಲಿ ಬಹಳ ಭಕುತಿ ಮಾಡಿ ।
ನೋಟಕೆ ಇವನಿಗೆ ಸರಿಯಿಲ್ಲೆನಿಸಿ ॥
ನಾಟಕ ಸ್ತ್ರೀಯಳಂತೆ ಬಯಲ ಡಂಭವ ತೋರಿ ।
ಊಟದ ಮಾರ್ಗದ ಜ್ಞಾನವಿದಲ್ಲದೆ ॥ ೪ ॥

ನಾನು ಎಂಬುದು ಬಿಟ್ಟು ಜ್ಞಾನಿಗಳೊಡಗೂಡಿ ।
ಏನೆಲ್ಲಕೆ ದೇವಪ್ರೇರಣೆಯೆಂದು ॥
ಧ್ಯಾನಿಸಿ ಮೌನದಿ **ಪುರಂದರ ವಿಠಲನ** ।
ಕಾಣದೆ ಮಾಡಿದ ಕಾರ್ಯಗಳೆಲ್ಲವು ॥ ೫ ॥

—ಪುರಂದರದಾಸ

—o—

— ೨೧ —

## ದಂಭವ ತೊರೆಯಿರಿ

(ರಾಗ—ಶಂಕರಾಭರಣ ಆದಿತಾಳ)

ತೀರ್ಥವನು ಪಿಡಿದವರೆಲ್ಲ
ತಿರುನಾಮಧಾರಿಗಳೇ ! ಜನ್ಮ ।
ಸಾರ್ಥಕವಿಲ್ಲದವರೆಲ್ಲ ಭಾಗವತರೇ ॥ ಪ ॥

ಮೂಗ್ಹಿಡಿದು ನೀರೊಳಗೆ
ಮುಳುಗಿ ಜಪತಪ ಮಾಡಿ
ವೇದಶಾಸ್ತ್ರ ಪುರಾಣಗಳ–
ನೋದಿ ತಿಳಿದು ॥

ಬಾಗಿ ಪರಸ್ತ್ರೀಯರಿಗೆ
ಭ್ರಮಿಸಿ ಕಣ್ಣಿಡುವಂಥ ।
ನೀತಿ ತಪ್ಪಿದವರೆಲ್ಲ
ದೇವ ಬ್ರಾಹ್ಮಣರೇ ಕೃಷ್ಣಾ ॥ ೧ ॥

ಅಂಗಲಿಂಗದೊಳಿರುವ ಚಿನ್ಮಯನ ತಿಳಿಯದೆ ।
ಲಿಂಗಾಂಗದ ನೆಲೆಯು ಗುರುತರಿಯದೆ ॥
ಜಂಗಮಸ್ಥಾವರದ ಭಾವವನು ತಿಳಿಯದೆ ।
ಭಂಗಿ ಮುಕ್ಕುಗಳೆಲ್ಲ ಲಿಂಗವಂತರಹರೇ ॥ ೨ ॥

ಅಲ್ಲಾ ಖುದಾ ಎಂದು ಆತ್ಮದಲಿ ತಿಳಿಯದೆ ।
ಮುಲ್ಲಾ ಶಾಸ್ತ್ರದ ನೆಲೆಯ ಗುರುತರಿಯದೆ ॥
ಬೊಳ್ಳು ಕೂಗನು ಕೂಗಿ ಬೊಗಳಿ ಬಾಯಾರುವಂಥ ।
ಕಳ್ಳ ತುರುಕರಿಗೆಲ್ಲ ವೀರಸ್ವರ್ಗವುಂಟೇ ಕೃಷ್ಣಾ ॥ ೩ ॥

ಹಾಸ್ಯಗಳನು ಕಲಿತು ಘೋಷವಸ್ತ್ರಗಳ್ಹಾಕಿ ।
ಆಸೆಗಳ ತೊರೆದೆವೆಂದು ತಪಸು ಕುಳಿತು ॥

ವಾಸುವೆಯ ಗುರುಕೃಪಾ ಗುರುತರಿಯದಂಥ ।
ವೇಷಧಾರಿಗಳೆಲ್ಲ ಸನ್ಯಾಸಿಗಳಾಗಬಲ್ಲರೇ । ॥ ೪ ॥

ಆರು ಚಕ್ರದ ನೆಲೆಯ ಅಷ್ಟಾಂಗ ಯೋಗದಲಿ ।
ಮೂರು ಮೂರ್ತಿಯ ಮೂರು ಕಡೆಯೊಳಿರಿಸಿ ॥
ಮಾರನಯ್ಯ **ಕಾಗಿನೆಲೆಯಾದಿ ಕೇಶವನ** ।
ಸಾರಿ ಭಜಿಸಿದವರಿಗೆ ಮನದ ಕೊರತೆಯುಂಟೆ ॥ ೫ ॥

—ಕನಕದಾಸ

— ೦ —

— ೨೨ —

## ಮನ ಮೆಚ್ಚಿ ನಡೆಯಿರಿ

(ರಾಗ—ಶಂಕರಾಭರಣ, ಆಟತಾಳ)

ಬಿಡು ಬಾಹ್ಯದೊಳು ದಂಭವ । ಮಾನಸದೊಳ
ಗೆಡೆವಿಡಿದಿರು ಶಂಭುವ ॥ ಪ ॥

ಒಡಲೊಳು ವಂಚಿಸಿ ಹೊರಗೆ ನೀ ಕೀರ್ತಿಯ
ಪಡೆದರೆ ಶಿವ ನಿನಗೊಲಿವನೆ ಮರುಳೆ ! ॥ ಅ ॥

ಜನಮೆಚ್ಚಿ ನಡೆಕೊಂಡರೇನುಂಟು ಲೋಕದಿ
ಮನಮೆಚ್ಚಿ ನಡೆಕೊಂಬುವುದೆ ಚಂದವು ।
ಜನರೇನು ಬಲ್ಲರು ಒಳಗಾಗೋ ಕೃತ್ಯವ
ಮನವರಿಯದ ಕಳ್ಳತನವಿಲ್ಲವಲ್ಲ ॥ ೧ ॥

ಜನರು ಮೆಚ್ಚುತೆ ನಿನ್ನ ಕೈಲಾಸಕೊಯ್ವರೆ ?
ಜನಮೆಚ್ಚದಿರೆ ಶಿವ ಬಿಡುತಿಹನೇ !
ಜನರಿಲ್ಲಿ ನಿನ್ನನು ದೊಡ್ಡಾತನೆಂದರೆ
ಚಿನುಮಯ ಶಿವನೇನಲ್ಲರಿಯನೆ ಮರುಳೆ ? ॥ ೨ ॥

ಮನದೊಳು ಶಿವತಾನೆ ಮನೆಮಾಡಿಕೊಂಡಿಹ
ಮನಮೆಚ್ಚಿ ನಡೆದರೆ ಶಿವ ಮೆಚ್ಚುವ ।
ಮನಕಂಜಿ ನಡೆಯದೆ ಜನಕಂಜಿ ನಡೆದರೆ
ಮನದಾಣ್ಮಗುರುಸಿದ್ಧ ಮರೆಯಾಗುವನಲ್ಲ ॥ ೩ ॥

—ಸರ್ಪಭೂಷಣ

—೦—

— ೨೩ —

## ಕೈ, ನಾಲಿಗೆ, ಮನವ ಕಟ್ಟು

(ರಾಗ—ನಾದನಾಮಕ್ರಿಯ. ಆದಿತಾಳ)

ವಾಣಿ ಪಾಣಿ ಮಾಣಿ ಮೂರು
ಕಟ್ಟಿದವನು ಶಿಷ್ಟನಪ್ಪನು ॥ ಪ ॥

ವಾಣಿ ಪಾಣಿ ಮಾಣಿ ಮೂರು
ಬಿಚ್ಚಿದವನು ಭ್ರಷ್ಟನಪ್ಪನು ॥ ಅ ॥

ಸುಳ್ಳು ರಕ್ಕು ಚಾಡಿ ಕುಹಕ
ವಾಡಬೇಡ ವಾಕ್ಕಿನಿಂದ ।
ಒಳ್ಳೆ ನುಡಿಯ ಮಂತ್ರ ಧ್ಯಾನ
ಬಿಡಲು ಬೇಡ ಮನಸಿನಿಂದ ॥ ೧ ॥

ಕಳವು ಹಿಂಸೆ ಕೊಲೆಗಳನ್ನು
ಮಾಡಬೇಡ ಹಸ್ತದಿಂದ ।
ಸಲಿಗೆಯಿಂದ ಬೇಡಿದರೆ
ಕೊಡುವ ಶಂಭು ದೃಢದಿ ನಂಬು ॥ ೨ ॥

ಮೋಹ ಬಿಡು ಕಾಮಿನಿಯರ
ಕೂಟದಲ್ಲಿ ನೋಟದಲ್ಲಿ ।
ಮೋಹವಿಡು **ಗುರುರಂಗನ**
ಅಡಿಗಳಲ್ಲಿ ಮನಸಿನಲ್ಲಿ ॥ ೩ ॥

—ಶಂಕರಾನಂದ

— ೨೪ —

## ಬಲ್ಲವರಲಿ ಬಿಲ್ಲಾಗಿ ತನುಮನವ ತಿದ್ದು

(ರಾಗ:— ಕಾಂಬೋದಿ ಝಂಪೆತಾಳ.)

ಇದು ಭಾಗ್ಯವಿದು ಭಾಗ್ಯವಿದು ಭಾಗ್ಯವಯ್ಯ ।
ಪದುಮನಾಭನ ಪಾದ ಭಜಿಸೆ ಸುಖವಯ್ಯ ॥ ಪ ॥

ಕಲ್ಲಾಗಿರಲು ಬೇಕು ಭವ ತೆರೆಯೊಳಗೆ ।
ಬಿಲ್ಲಾಗಿರಲು ಬೇಕು ಬಲ್ಲವರೊಳಗೆ ॥
ಮೆಲ್ಲನೆ ಮಾಧವಗೆ ಮನವ ಮುಟ್ಟಿಸಬೇಕು ।
ಬೆಲ್ಲವಾಗಲು ಬೇಕು ಬಾಂಧವರೊಳಗೆ ॥ ೧ ॥

ಬುದ್ಧಿಯಿಂ ತನುಮನವ ತಿದ್ದಿಕೊಳ್ಳಲು ಬೇಕು ।
ಮುದ್ದಾಗಬೇಕಯ್ಯ ಮುನಿಯೋಗಿಗಳಿಗೆ ॥
ಸಿದ್ಧಜನರಬ್ಧಿಯೊಳ್ ಮೀನಾಗಿರಲು ಬೇಕು ।
ಶುದ್ಧನಾಗಿರಬೇಕು ಕರಣತ್ರಯಗಳಲಿ ॥ ೨ ॥

ವಿಷಯಭೋಗ ತೃಣಕೆ ಉರಿಯಾಗಲು ಬೇಕು ।
ನಿಶಿದಿನವು ಶ್ರೀಹರಿಯ ನೆನೆಯ ಬೇಕು ॥
ವಸುಧೀಶ ಪುರಂದರ **ವಿಠ್ಠಲರಾಯನ** ।
ಹಸನಾದ ದಾಸರ ಸೇವಿಸಲು ಬೇಕು ॥ ೩ ॥

—ಪುರಂದರದಾಸ

—೦—

## (ಆ) ಪದ್ಯಗಳು:—

## [ ೧೦ ]

## ಜರೆಯ ಮುನ್ನ ಹರಿಯ ಪಡೆ

ಅಮೃತತ್ವವು ಬೇಕೆಂದೊಡೆ
ಅಮೃತ ಸಮ ಶಮೆಯ ದಮೆಯ ಶಾಂತಿಯನಾರ್ಜಿಸು ।
ಅಮೃತೇಶನ ಸತ್ಕೃಪೆಯಿಂ
ದಮೃತತ್ವವು ಪ್ರಾಪ್ತಿಯಪ್ಪು,ದು ಸತ್ಯಂಸತ್ಯಂ ॥ ೧ ॥

ಪುರುಷನ ದೇಹಕೆ ರೋಗವು
ಜರೆ ಮರಣಗಲದಲೆ ಕಾದುಕೊಂಡಿರುವದರಿಂ ।
ಜರೆಯಾವರಿಸುವ ಪೂರ್ವದಿ
ವರಮುಕ್ತಿಂಗೆತ್ನಗೈವನುತ್ತಮನೆನಿವಂ ॥ ೨ ॥

ಮರಣ ಸಮೀಪಿಸಿದಾಗಳ್
ನೆರೆಮುಕ್ತಿಯ ಪಡೆವೆನೆನಲು, ಉರಿಯುವ ಮನೆಯ ।
ತ್ವರಿತದಿ ಬಾವಿಯ ತೋಡಿಸಿ
ವರ ಜಲದಿಂ ತಣಿಪೆನೆಂಬಂ ಮೂರ್ಖನ ಸಾಮ್ಯಂ ॥ ೩ ॥

ಧರೆಯೊಳು ಯೌವನ ಕಾಲದಿ
ವರಧನವಾರ್ಜಿಸಲು ಯತ್ನಗೈಯ್ಯುವ ಚಂದದಿ ।
ಮರೆಯದೆ ಯೌವನ ಕಾಲದಿ
ವರಮುಕ್ತಿಗೆ ಯತ್ನಗೆಯ್ವ ಜಾಣನು ಜಗದೊಳ್ ॥ ೪ ॥

—ಶಂಕರಾನಂದ

—೦—

## [ ೧೧ ]

## ಅಧಿಕಾರಿ ಮುಮುಕ್ಷು

ದುಃಖ ಬೆರೆಯದ ಸುಖವದಾರಿಗೆ ।
ಸಿಕ್ಕುವದು ಶುಕಯೋಗಿ ? ಮರ್ಕಟ ।
ಸೊಕ್ಕಿ ಕೀಲನು ಕಿತ್ತು ಬಿಸುಟಂದದಲಿ, ಮಧುಘೃತವ ॥

ಇಕ್ಕಿ ಸೆಕ್ಕಲು ಖಡ್ಗಧಾರೆಗೆ ।
ಸಿಕ್ಕಿ ನಾಲಗೆ ಸೀಳುವಂದದ ।
ಲುಕ್ಕಿ ವಿಷಯಸುಖಕ್ಕೆಳಸಿ ಕಡುದುಃಖಬಡುತಿಹರು ॥ ೧ ॥

ಏನು ಕಲಿತೊಡದೇನು ? ಯತ್ನದ ।
ಲೇನು ಮಾಡಿದೊಡೇನು ? ಸರ್ವವು ।
ಕಾನನದ ಬೆಳದಿಂಗಳಂದದಿ ವ್ಯರ್ಥವಾಗಿಹುದು ॥

ಸ್ವಾನುಭವ ಸುಜ್ಞಾನವಿಲ್ಲದ ।
ಮಾನವನು ಬದುಕಿದೊಡದೇನವ ।
ಶ್ವಾನಶೂಕರರಂತೆ ಹೊಟ್ಟೆಯ ಹೊರೆದುಕೊಂಡಿಹನು ॥ ೨ ॥

ಬಲ್ಲವರ ಬೆಸಗೊಂಬ; ಶಾಸ್ತ್ರದೊ ।
ಳುಳ್ಳ ಸಾರವ ತಿಳಿವ; ಸಾಧುಗ ।
ಳಲ್ಲಿ ಸಂಗವ ಪಡೆವನವರಾಚರಣೆಯಲಿ ನಡೆವ ॥

ನಲ್ಲಲಿತ ಸದ್ವಾಸನೆಗಳನು ।
ಮೆಲ್ಲನಭ್ಯಾಸವನು ಮಾಡುವ ।
ನೊಳ್ಳಿತಹ ಮಾರ್ಗದಲಿ ನಡೆದು ಮುಮುಕ್ಷುವೆನಿಸುವನು ॥ ೩ ॥

ತರುಣಿಯರು ತನ್ನಿದಿರೊಳೆಸೆದಿರೆ ।
ಕುರುಡನಂತಹ; ಪರರ ನಿಂದೆಯ ।
ನೊರೆಯಲನ್ಯರು ಬಧಿರನಂದದಿ ಕೇಳನದನೊಲಿದು ॥

ಕರವಿಕಲನಂದದಲಿ ಹಿರಿದಹ ।
ಪರರ ಧನವನು ಹಿಡಿಯ; ದುಷ್ಕರು ।
ಜರಿಯೆ ತನ್ನನು ಮರಳಿ ಜರಿಯ; ಮುಮುಕ್ಷು ನೋಡೆಂದ ॥ ೪ ॥

ತನಯ ಕೇಳಧ್ಯಾತ್ಮವಾಸನೆ ।
ಯನವರತ ಶಾಸ್ತ್ರಾರ್ಥ ಚಿಂತನೆ ।
ಘನವಿವೇಕ, ವಿರಕ್ತಿ ಸದ್ಗುಣ ವೃತ್ತಿ ಸತ್ಸಂಗ ॥

ಅನಘ ಗುರುಶುಶ್ರೂಷೆ ಮೊದಲಾ ।
ದಿನಿತು ಸದ್ವರ್ತನೆಯೊಳೊಂದಿಹ ।
ಮನುಜನೇ ತತ್ವಾಧಿಕಾರಿ ಮುಮುಕ್ಷುವೆನಿಸುವನು ॥ ೫ ॥

—ಮಹಾಲಿಂಗರಂಗ

—೦—

## [ ೧೨ ]
## ಇಹಪರಂಗಳ ಚಿಂತೆ

ಸದರ ಸುಖವನೆ ತಾನನುಭವಿಸುವೆನೆಂಬು ।
ದದಕಿಹಪರಚಿಂತೆ ಬೇಕು ॥
ಇದಿರನರಿಯಬೇಕು ತನ್ನನರಿಯಬೇಕು ।
ಚದುರು ಬೇಕೆಂದು ಪಾಡಿದರು ॥ ೧ ॥

ಎರಡುಗಣ್ಣಿಂದ ಲೋಕವ ನೋಡಬೇಕು ತ ।
ನ್ನಿರವ ಸುಜ್ಞಾನ ದೃಷ್ಟಿಯೊಳು ॥
ತಿರುಗಿ ನಿಟ್ಟಿಸಬೇಕು ಮುಕ್ಕಣ್ಣಗಲ್ಲದೆ ।
ಲ್ಲರಿಗೆ ಬಹುದೆ ಸುಖಸಿದ್ಧಿ ॥ ೨ ॥

ವರಸತಿಯರ ಕೂಡ ನುಡಿದಾಡಬೇಕೊಮ್ಮೆ ।
ಸರಸತಿಯೊಳು ನುಡಿ ಬೇಕು ॥
ಪರಸತಿಯೊಳು ಮೌನ ಮುಕ್ತಿಸಲೆಧ್ಯಾನ ।
ವಿರಬೇಕು ನಾಲ್ಮೊಗ ಬೇಕು ॥ ೩ ॥

ಮೈಯ್ಯ ಸುಖಕೆ ಮರುಳಾಗಿ ತಮ್ಮಾತ್ಮನ ।
ಸಯ್ಯನರಿಯದೆ ಭೋಗಿಪುದು ॥
ಉಯ್ಯ ಕೈವಿಡಿದು ತಂಡುಲವೆ ಬಿಸುಟ ಮರು– ।
ಳಯ್ಯರ ಮಾರ್ಗವೇನತ್ತ ॥ ೪ ॥

ಈ ಗುಣವಾಗುಣ ಬೇಕೆನಲೇಕಾತ್ಮ ।
ಯೋಗವಿಡಿದ ಭೋಗಿಗಳಿಗೆ ॥
ಹೋಗಂದರೆ ಹೋಗದೆಯ್ತುರುತಿಹವು ಮ– ।
ಹಾಗುಣಗಳು ತಮ್ಮ ತಾವ ॥ ೫ ॥

ಪರುಷದ ಮಣಿಯೊಂದು ಕೈಯೊಳುಳ್ಳವಗೆಲ್ಲ ।
ಸಿರಿಗಳು ತಾವೇ ಬಂದಿರವೇ ॥
ಪೊರ ಬೊಮ್ಮದನುಭವವೊಂದುಳ್ಳರವನಿಗೆ ।
ದೊರಕದ ದೊಡ್ಡಿತೊಂದುಂಟೆ ? ॥ ॥ ೬ ॥

—ರತ್ನಾಕರ

—o—

## [ ೧೩ ]

## ತನು ಸುಖವ ತೊರೆದು ಆತ್ಮ ಸುಖವ ಪಡೆ

ಪ್ರಾಯ ಶಕ್ತಿಯ ತನುಸುಖಕಾಗಿ ಕೆಡಿಸದೆ ।
ಒಯ್ಯಾರದಿಂದಾತ್ಮಸುಖಕೆ ॥
ಕಾಯವ ತಪಸಿ ಗೊಡ್ಡಿದರವರೆ ಮಹಾ– ।
ರಾಯರೆಂದೆನು ಮನವೊಚ್ಚಿ ॥ ೧ ॥

ಪ್ರಾಯ ತಗ್ಗದ ಮುನ್ನ ಕಾಯ ಜಗ್ಗದ ಮುನ್ನ ।
ಸ್ತ್ರೀಯರು ಮಕ್ಕಳೆಂದೆಂಬ ॥
ಮಾಯೆ ಮುತ್ತದಮುನ್ನಯೆಚ್ಚರಬೇಕೆಂದು ।
ಪಾಯವ ನೋಡಿದರವರು ॥ ೨ ॥

ಹೆಣ್ಣಹಿಡಿದ ಮೇಲೆ ಹೊನ್ನ ಹಿಡಿಯಬೇಕು ।
ಮಣ್ಣ ಹಿಡಿಯಬೇಕು ಸಹಜ ॥
ಹೆಣ್ಣು ಹೊನ್ನು ಮಣ್ಣುವಿಡಿದಾತ್ಮರಿಲ್ಲರು ।
ಮಣ್ಣುವಿಡಿದ ಲೋಹದಂತೆ ॥ ೩ ॥

ಹೆಣ್ಣ ಸೋಂಕದ ಮನ ಪುಟವೇರುತಿಹುದದು ।
ಹೆಣ್ಣ ತೋಳ್ವಲೆಗೆ ಬಿದ್ದಾಗ ॥
ಪೊಣ್ಣಪೊಣ್ಣನೆ ಹಾರುವೆರಳೆ ಮೋಸದಿಕಾಲು ।
ಕಣ್ಣಿಗೆ ಸಿಲುಕಿದಂತಹುದು ॥ ೪ ॥

ಬೊಟ್ಟಿನನಿತು ಸುಖಕಾಗಿ ದುಃಖವನೊಂದು ।
ಬೆಟ್ಟದನಿತನುಂಬರಕಟಾ ॥
ಬಿಟ್ಟರೆ ವಿಷಯವ ಬೆಟ್ಟದನಿತೊಂದು ।
ಬೊಟ್ಟಿನಷ್ಟಿಹುದು ಭವಾಬ್ಧಿ ॥ ೫ ॥

ಕಿಚ್ಚು ನೀರಿಂದ ನಂದುವುದದು ನಯ್ಯಿಂದ ।
ಹೆಚ್ಚುವುದಂತೆ ಕಾಮಾಗ್ನಿ ॥
ಸಚ್ಚಿದಾನಂದಾತ್ಮರಸದಿ ನಂದುವುದದು- ।
ಹೆಚ್ಚುವುದಬಲೆಯರಿಂದ ॥ ೬ ॥

—ರತ್ನಾಕರ

— o —

[ ೧೪ ]

## ಸದಾಚಾರ ಸ್ವರೂಪ

ಗುರುಗಳಿಗೆ ಹಿರಿಯರಿಗೆ ಶಿರಬಾಗಿ ಎರಗಿದರೆ ।
ನರಸುರರೊಲಿದು ಸಿರಿಸುರಿದು ಕೈಲಾಸ ।
ಕರತಲಾಮಲಕ ಸರ್ವಜ್ಞ ॥ ೧ ॥

ಅನ್ನವನು ಇಕ್ಕುವದು, ನನ್ನಿಯನು ನುಡಿಯುವದು ।
ತನ್ನಂತೆ ಪರರ ಬಗೆದಡೆ ಕೈಲಾಸ ।
ಬಿನ್ನಣವಕ್ಕು ಸರ್ವಜ್ಞ ॥ ೨ ॥

ಸತ್ಯವೆಂಬುದು ತಾನು ನಿತ್ಯದಲಿ ಮೆರೆದಿಹುದು ।
ಮಿಥ್ಯಸತ್ಯವನು ಬೆರೆದರೂ ಇಹಪರದಿ ।
ಸತ್ಯಕ್ಕೆ ಜಯವು ಸರ್ವಜ್ಞ ॥ ೩ ॥

ಮಣ್ಣು ಬಿಟ್ಟವ ದೈವ, ಹೊನ್ನು ಬಿಟ್ಟವ ದೈವ ।
ಹೆಣ್ಣ ನೆರೆ ಬಿಟ್ಟರವ ದೈವ । ಜಗಕೆ ಮು- ।
ಕ್ಕಣ್ಣನೇ ದೈವ ! ಸರ್ವಜ್ಞ ॥ ೪ ॥

ಆಡದೆ ಮಾಡುವನು ರೂಢಿಯೊಳಗುತ್ತಮನು ।
ಆಡಿ ಮಾಡುವನು ಮಧ್ಯಮನಧಮ ತಾ ।
ನಾಡಿ ಮಾಡದವನು ಸರ್ವಜ್ಞ ॥ ೫ ॥

—ಸರ್ವಜ್ಞ

—o—

## ( ಇ ) ವಚನಗಳು:—

( ೨೧ )

### ಸತ್ಯ (ಅಸತ್ಯ) ವಿಚಾರ

ದೇವಲೋಕ ಮರ್ತ್ಯಲೋಕವೆಂಬುದು
ಬೇರಿಲ್ಲ ಕಾಣರೋ !
ಸತ್ಯವ ನುಡಿವುದೇ ದೇವಲೋಕ
ಅಸತ್ಯವ ನುಡಿವುದೇ ಮರ್ತ್ಯಲೋಕ
ಆಚಾರವೇ ಸ್ವರ್ಗ ಅನಾಚಾರವೇ ನರಕ
ಇದಕ್ಕೆ ನೀವೇ ಪ್ರಮಾಣ **ಕೂಡಲ ಸಂಗಮ ದೇವಾ**

( ೨೨ )

### ಅಂತರಂಗ ( ಬಹಿರಂಗ) ಶುದ್ಧಿ

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ
ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ
ಇದೇ ಅಂತರಂಗದ ಶುದ್ಧಿ, ಇದೇ ಬಹಿರಂಗದ ಶುದ್ಧಿ
ಇದೇ ನಮ್ಮ **ಕೂಡಲ ಸಂಗಮ ದೇವರ**ನೊಲಿಸುವ ಪರಿ

( ೨೩ )

### ದಯವೇ ಧರ್ಮದ ಮೂಲ

ದಯವಿಲ್ಲದ ಧರ್ಮವದಾವುದಯ್ಯ ?
ದಯವಿರಬೇಕು ಸಕಲ ಪ್ರಾಣಿಗಳಲ್ಲಿ !
ದಯವೇ ಧರ್ಮದ, ಮೂಲವಯ್ಯ !
**ಕೂಡಲ ಸಂಗಮ** ದೇವರಂತಲ್ಲದೊಲ್ಲನಯ್ಯ ।

( ೨೪ )

**ಪರಧನ (ಪರಸ್ತ್ರೀ) ಯರಿಗಂಜು**

ಹರಿವ ಹಾವಿಗಂಜೆ, ಉರಿಯ ನಾಲಿಗೆಗಂಜೆ
ಸುರಿಗೆಯ ಮೊನೆಗಂಜೆ
ಒಂದುಕಂಜುವೆ, ಒಂದಕ್ಕಳುಕುವೆ
ಪರಸ್ತ್ರೀ ಪರಧನ ವೆಂಬ ಜೂಬಿಂಗಂಜುವೆ
ಮುನ್ನಂಜದ ರಾವಣನೇ ವಿಧಿಯಾದ ?
ಅಂಜುವೆನಯ್ಯಾ **ಕೂಡಲ ಸಂಗಮ ದೇವಾ**

( ೨೫ )

**ತನ್ನ ಕೋಪ ತನ್ನನ್ನು ಸುಡುವದು**

ತನಗೆ ಮುನಿವರಿಗೆ ತಾ ಮುನಿಯ ಲೇಕಯ್ಯ ?
ಅವರಿಗಾದಡೇನು, ತನಗಾದಡೇನು ?
ತನುವಿನ ಕೋಪ, ತನ್ನ ಹಿರಿಯತನದ ಕೇಡು
ಮನದ ಕೋಪ, ತನ್ನ ಅರುವಿನ ಕೇಡು
ಮನೆಯೊಳಗಣ ಕಿಚ್ಚು ತನ್ನ ಮನೆಯ ಸುಟ್ಟಲ್ಲದೆ
ನೆರೆ ಮನೆ ಬೇವುದೆ **ಕೂಡಲ ಸಂಗಮ ದೇವಾ**

( ೨೬ )

**ಸ್ತುತಿ ನಿಂದೆಗಳನು ಸಹಿಸು**

ಬೆಟ್ಟದ ಮೇಲೊಂದು ಮನೆಯಮಾಡಿ,
ಮೃಗಂಗಳಿಗಂಜಿದಡೆಂತಯ್ಯ ?
ಸಮುದ್ರದ ತಡಿಯಲ್ಲಿ ಮನೆಯ ಮಾಡಿ,
ನೊರೆತೆರೆಗಳಿಗಂಜಿದಡೆಂತಯ್ಯೊ !
ಸಂತೆಯೊಳಗೊಂದು ಮನೆಯ ಮಾಡಿ,
ಶಬ್ದಕ್ಕೆ ನಾಚಿದಡೆಂತಯ್ಯ ?
**ಚೆನ್ನ ಮಲ್ಲಿಕಾರ್ಜುನ** ಕೇಳಯ್ಯ
ಲೋಕದೊಳಗೆ ಹುಟ್ಟಿದ ಬಳಿಕ,

ಸ್ತುತಿ ನಿಂದೆಗಳು ಬಂದೊಡೆ,
ಮನದಲ್ಲಿ ಕೋಪವ ತಾಳದೆ, ಸಮಾಧಾನಿಯಾಗಿರಬೇಕು

( ೨೭ )

**ಡಾಂಭಿಕರಿಗೆ ದೇವನೊಲಿಯ**

ಜನಮೆಚ್ಚು ಶುದ್ಧನಲ್ಲದೆ, ಮನಮೆಚ್ಚು ಶುದ್ಧನಲ್ಲವಯ್ಯ !
ನುಡಿಯಲ್ಲಿ ಜಾಣನಲ್ಲದೆ, ನಡೆಯ.ಲ್ಲಿ ಜಾಣನಲ್ಲವಯ್ಯ
ವೇಷದಲ್ಲಿ ಅಧಿಕನಲ್ಲದೆ, ಭಾಷೆಯಲ್ಲಿ ಅಧಿಕನಲ್ಲವಯ್ಯ
ಧನದೊರಕದೆ ನಿಸ್ಪೃಹನಲ್ಲದೆ,
ಧನ ದೊರಕಿ ನಿಸ್ಪೃಹನಲ್ಲವಯ್ಯ
ಏಕಾಂತದ್ರೋಹಿ, ಗುಪ್ತವಾತಕಿ, ಯುಕ್ತಿಶೂನ್ಯರಿಗೆ,
ಸಕಳೇಶ್ವರ ದೇವರು, ಒಲಿ ಒಲಿ ಎಂದೊಡೆ,
ಎಂತೊಲಿವನಯ್ಯ ?

( ೨೮ )

**ಶೀಲ ನೇಮಗಳು**

ಪರಧನವೊಲ್ಲ ದಿಪ್ಪುದೆ ವ್ರತ,
ಪರಸ್ತ್ರೀಯ ಕೂಡದಿಪ್ಪುದೇ ಶೀಲ
ಸರ್ವಜೀವ ಕೊಲ್ಲದಿಪ್ಪುದೇ ನೇಮ
ತಥ್ಯವ ಮಿಥ್ಯವ ತಿಳಿದಿಪ್ಪುದೇ ನಿತ್ಯನೇಮ
ಇದು **ಈ ಶಾನ್ಯ ಮೂರ್ತಿ ಮಲ್ಲಿಕಾರ್ಜುನ** ಲಿಂಗಕ್ಕೆ
ಸಂದೇಹ ವಿಲ್ಲದ ವ್ರತ

( ೨೯ )

**ವಿಷಯ ವಿಷದಿಂದವಿವೇಕಹಾನಿ**

ವಿಷಯದ ಪಿತ್ತ ತಲೆಗೇರಿದಲ್ಲಿ,
ವಿವೇಕವೆಂಬ ದೃಷ್ಟಿ ನಷ್ಟವಾಗಿ,
ಪಶುಪತಿಯ ನೆನಹು ಕೆಟ್ಟು, ಮತಿಮಂದ ವಾದಲ್ಲಿ,
ಮಂತ್ರದ ನೆನಹುಂಟೇ ಹೇಳಾ **ರಾಮನಾಥಾ !**

( ೩೦ )

**ಹೆಣ್ಣು ಹೊನ್ನು ಮಣ್ಣು ಬಯಸದೆ ದೇವರ ದಾಸನಾಗು**

ಪರವಧುವ ನೆನೆಯದೆ, ಪರಧನವ ಮುಟ್ಟದೆ,
ಪರದೈವ ದಿಚ್ಛೆ ನಡೆಯದೆ,
ಗುರುಲಿಂಗ ಜಂಗಮಕ್ಕೆ ವರದಾಸನಾದಾತನೆ,
ಧರೆಮೂರಕ್ಕೆ ಗುರುವಾಗಿಪ್ಪನೈ **ರಾಮನಾಥಾ**

— ೦ —

# ಮಕರಂದ

ಪದಸಂ ಪ್ರಸಾದ ಸದನಂ
ಸದಯಂ ಹೃದಯಂ ಸುಧಾಮುಚೋ ವಾಚಃ |
ಕರಣಂ ಪರೋಪಕರಣಂ
ಯೇಷಾಂ ಕೇಷಾಂ ನತೇ ವಂದ್ಯಾಃ || ೧ ||

ಜಾಡ್ಯ ಧಿಯೋಹರತಿ ಸಿಂಚತಿ ವಾಚಿ ಸತ್ಯಂ
ಮಾನೋನ್ನತಿ ದಿಶತಿ ಪಾಪಮುಪಾಕರೋತಿ |
ಚಿತ್ತಂ ಪ್ರಸಾದಯತಿ ದಿಕ್ಷು ತನೋತಿ ಕೀರ್ತಿಂ
ಸತ್ಸಂಗತಿಃ ಕಥಯ ಕಿಂನಕರೋತಿ ಪುಂಸಾಂ || ೨ ||

ಗಂಗಾ ಪಾಪಂ ಶಶೀ ತಾಪಂ
ದೈನ್ಯಂ ಕಲ್ಪತರುಸ್ತಥಾ |
ಪಾಪಂ ತಾಪಂ ಚ ದೈನ್ಯಂ ಚ
ಹಂತಿ ಸಂತಾ ಮಹಾತ್ಮನಃ || ೩ ||

ನಾಹಂ ವಸಾಮಿ ವೈಕುಂಠೆ | ಯೋಗಿನಾಂ ಹೃದಯೆ ರವೌ ||
ಮದ್ಭಕ್ತಾಯತ್ರ ಗಾಯಂತಿ | ತತ್ರ ತಿಷ್ಠಾಮಿ ನಾರದ || ೪ ||

— ೨೫ —

## ಸಂತರ ಸಂಗವ ಸಂಪಾದಿಸು

(ರಾಗ.— ಕಾಂಬೋದಿ; ಆಟತಾಳ)

ಹರಿದಾಸರ ಸಂಗವಿರಬೇಕು ।
ಪರಮಜ್ಞಾನಿಗಳ, ಸಂಪಾದಿಸಬೇಕು ॥ ಪ ॥

ಅತಿಜ್ಞಾನಿಯಾಗ ಬೇಕು ।
ಹರಿಕಥೆ ಕೇಳಬೇಕು ।
ಯತಿಗಳಪಾದಕ್ಕೆ ಎರಗಬೇಕು ॥
ಸತಿಸುತರಿರಬೇಕು ।
ಅತಿಮೋಹ ಬಿಡಬೇಕು ।
ಮತಿಯೊಂದು ಬಿಡದೆ ಹರಿಪೂಜಿಪರಸಂಗ ॥ ೧ ॥

ನಡೆಯಾತ್ರೆ ಯನಬೇಕು ।
ನುಡಿಸೇವೆ ಯನಬೇಕು ।
ಬಿಡದೆ ಹರಿಪೂಜೆಯ ಮಾಡಬೇಕು ॥
ಅಡಿಗಡಿಗೆ ನೆನೆಯಬೇಕು ।
ಹರಿಗಡ್ಡ ಬೀಳಬೇಕು ।
ಬಿಡದೆ ಹರಿಭಜನೆ ಮಾಡುವವರಸಂಗ । ೭ ॥

ಏಕಾಂತ ಕೊಡಬೇಕು ।
ಲೋಕಾಂತ ಬಿಡಬೇಕು ।
ಲೋಕೈಕನಾಥನ ಭಜಿಸಬೇಕು ॥
ಸಾಕು ಸಂಸಾರವೆಂದು ।
ಕಕುಲಾತಿ ಬಿಡಬೇಕು ।
ಶ್ರೀಕಾಂತ **ಪುರಂದರ ವಿಠಲ ದಾಸರ** ಸಂಗ ॥ ೩ ॥

—ಪುರಂದರದಾಸ

— ೦ —

— ೨೬ —

## ಕಲ್ಪತರುವಿಗೂ ಮಿಗಿಲಾದುದು

(ರಾಗ— ಬಿಹಾಗ ಝಂಪೆತಾಳ)

ಸಜ್ಜನರ ಸಂಗ ಸ್ವಹಿತಕೆ ಸುಖಸನ್ಮತ
ಹೆಜ್ಜೆಗೆ ಎದರಿಡುತದೆ ಅಮೃತಾ ॥ ಪ ॥
ಗಂಗೆಯೊಳು ಮುಳುಗಿ ತಾ ಮಿಂದರ್ಹೋಗುದುಪಾಪ
ಹಾಂಗೆಂದಿಗಲ್ಲ ಸಜ್ಜನಪ್ರತಾಪ ।
ಕಂಗಳಿಂದಲಿ ಕಂಡರ್ಹೋಗುವದು ತಾ ಪಾಪ
ಸಂಗಸುಖದಲಿ ಸರ್ವ ಪುಣ್ಯ ಮೂಪ ॥ ೧ ॥
ಚಂದ್ರ ಶೀತಳದೊಳು ನಿಂದರ್ಹೋಗುದು ತಾಪ
ಎಂದೆಂದಿಗ್ಹಾಂಗಲ್ಲ ಸಜ್ಜನ ಸಮೀಪ ।
ಒಂದೆ ಮನದಲಿ ನೆನೆದರ್ಹಿಂಗಿ ಹೋಗುದು ತಾಪ
ವಂದಿಸಿದರವ ಮೂರು ಲೋಕ ಕಾಪ ॥ ೨ ॥
ಕಲ್ಪ ತರುವಿಗೆ ಕಲ್ಪಿಸಿದರ್ಹೋಗುದು ದೈನ್ಯ
ಒಲುಮಿಂದ್ಹಾಗಲ್ಲ ಸದ್ಗುರು ಸುಪುಣ್ಯ ।
ಕಲ್ಪಿಸದೆ ಕೊಡುವದಿದು ನೋಡಿಘನತಾರ್ಕಣ್ಯ
ಸಲಹುತೀಹ್ಯ **ಮಹಿಪತಿ** ಗಿದೆವೆ ಧನ್ಯ ॥ ೩ ॥

— ಮಹಿಪತಿ

— ೦ —

— ೨೭ —

## ಸಂತರಿಂದಲೇ ಪರಮಾನಂದ

(ರಾಗ— ಸಾವೇರಿ; ಝಂಪೆತಾಳ)

ಹರಿ ಭಕುತರ ದರುಶನವು ಅತಿಹರುಷವು ॥ ಪ ॥
ಹರಿ ನೆನೆವರಾ ನೆರೆಯು ನವನಿಧಾನದ ಕೆರೆಯು
ಹರಿಸ್ಮರಿಸುವರ ಮರಿಯು ವಜ್ರ ವರಿಯು ।
ಹರಿಭಜಿಸುವರ ನೆರಿಯು ನಿಜಘನಾತ್ಮದ ಝರಿಯು
ಹರಿಮಹಿಮರಾ ಕರೆಯು ಪರಮಾನಂದ ಥೆರೆಯು ॥ ೧ ॥

ಹರಿಶರಣರಾ ನುಡಿಯು ಕರುಣದಮೃತಧ್ವನಿಯು
ಹರಿಯ ದಾಸರ ನಡೆಯು ನಿಲ್ಲುಕಡಿಯು ।
ಹರಿ ಭಕ್ತರಿದ್ದೆಡೆಯು ಪುಣ್ಯಕ್ಷೇತ್ರದ ಧಡಿಯು
ಹರಿ ಮಹಿಮರಾ ಕಡಿಯು ಕ್ಯಾದಿಗ್ಗೊಡಿಯು ॥ ೨ ॥

ಹರಿ ಭಕ್ತರಾ ಸಂಗ ಸ್ನಾನ ಗಂಗಾ ತುಂಗ
ಹರಿ ಮಹಿಮರಾ ಅಂಗ ಆತ್ಮರಂಗ ।
ಹರಿ ಪರಮಾನಂದ ಗುರು ಕರುಣಾಕೃಪಾಂಗ
ತರಳ **ಮಹಿಪತಿ** ಭವಭಯದ ಭೃಂಗಾ ॥ ೩ ॥

—ಮಹಿಪತಿ

— ೦ —

— ೨೮ —

## ಶರಣರ ಸೇವೆಯಲ್ಲಿರಿಸು

(ರಾಗ— ಮಲಹರಿ, ಝಂಪೆ ತಾಳ)

ಹರನೆ ನಾ ನಿಮ್ಮಲ್ಲಿ । ವರವ ಬೇಡುವೆನೊಂದೆ ।
ಶರಣರಿಗೆ ಭೃತ್ಯನಾ ಗಿರಿಸೆನ್ನನು ॥ ಪ ॥

ಅವರಲ್ಲಿ ಶಿವನಿಹನು । ಶಿವನಿರ್ದೊಡಲ್ಲಿ ತಾ – ।
ತವೆ ಸಕಲ ಶರಣಗಣ ಮೆರೆದಿಪ್ಪುದು ॥
ಅವರ ಅಂಗಳ ನಿತ್ಯ । ಶಿವಲೋಕ ವಾಗಿಹುದು ।
ಅವರ ಘನಕಿನ್ನೇನ ಸರಿಯಕಾಣೆ ॥ ೧ ॥

ಅವರ ಕಿಂಕರನಾಗಿ । ಅವರ ಪಾದವ ತೊಳೆದು ।
ಅವರ ಪಡುಗೆಯ ಬೆಳಗಿ ತೊಳೆದು ತಂದು ॥
ಅವರ ಹಾವುಗೆ ಪಿಡಿದು । ಅವರಡಿಗಳನು ಒರಸಿ ।
ಅವರಿಚ್ಛೆಯೊಳಗಿರ್ಪ ವರವ ಶಿವನೆ ॥ ೨ ॥

ಅವರುಂಡು ಮಿಕ್ಕಿದನು । ಅವರುಟ್ಟು ಬಿಟ್ಟುದನು ।
ಅವರುಗಿದ ತಾಂಬೂಲವ ಸವಿದು ನಾನು ॥
ಅವರಂಗಳವ ಗುಡಿಸಿ । ಅವರ ಬಾಗಿಲಕಾಯ್ದು ।
ಅವರ ಕೀಳಲಿ ಸೇರಿಕೊಂಡಿರ್ಪುದ ॥ ೩ ॥

ಅವರ ಎತ್ತಾಗಿ ನಾ । ನವರ ತೊತ್ತಾಗಿ ನಾ - ।
ನವರ ಪಶುವಾಗಿ ನಾ ಸುಖದಿರ್ಪುದ ॥
ಅವರ ಬಾಗಿಲೊಳಿರ್ಪ । ತವೆ ಸೊಣಗ ನಾನಾಗಿ ॥
ಅವರ ಚರಣದ ಧೂಳಿ ತೊಡೆದಿರ್ಪುದ ॥ ೪ ॥

ಶಿವ ನಿಮ್ಮ ಘನದಿಂದ । ಅವರ ಘನವತ್ಯಧಿಕ ।
ಅವರಂಗಳ ದ್ವಿತೀಯ ಕೈಲಾಸವು ॥
ಅವರ ನಾ ಭವ ಭವದಿ । ತವೆ ಬಿಡದೆ ಇರ್ಪುದನು ।
ಶಿವ **ಷಡಕ್ಷರಿ** ವರನೆ ಪಾಲಿಸೆನಗೆ ॥ ೫ ॥

— ಷಡಕ್ಷರಿ

—o—

## ( ಆ ) ಪದ್ಯಗಳು:—

[ ೧೫ ]

### ಸತ್ಸಂಗ ವಿಸ್ತಾರ

ಸತ್ಸಂಗವೆಂದರದು ಸಜ್ಜನರ ಸಂಗವೈ
ತನಗಿಂತ ವರಗುಣದವರ ಸಂಗವು
ಸದ್ಗುರುಗಳಿತ್ತ ನಾಮದ ನೆನವು ಸತ್ಸಂಗ
ಉಸಿರಲದನುಸುರುವದು ಸತ್ಸಂಗ ॥ ೧ ॥

ನಿಚ್ಚ ಸದ್ವಸ್ತುವಿನ ಅನುಭಾವ ಸತ್ಸಂಗ
ಇದರ ಅನುಸಂಧಾನವದುವೆಯಿಹುದು
ಅಚ್ಯುತನ ಸಂಗದಿಂದಚ್ಯುತನು ತಾನಾಗಿ
ಸಚ್ಚರಿತರಾಗಿ ಪಾರಾಗುತಿಹುದು ॥ ೨ ॥

—ನಿಂಬರಗಿ ಮಹಾರಾಜ

—o—

[ ೧೬ ]

### ಅದರ ಅಮೋಘ ಪರಿಣಾಮ

ಕೆಂಡ ಕಾಣದೆ ಮುಟ್ಟಿದರು ನರಿ ।
ಕಂಡು ಮುಟ್ಟಲು ದಹಿಸಲಿಪ್ಪದೆ ।
ಪುಂಡರೀಕ ದಳಾಯತಾಕ್ಷನ ವಿಮಲ ಪದಪದ್ಮ ॥

ಉಂಡುಣುಗಳೆಂದೆನಿಪ ಭಕ್ತರಂ ।
ಹಿಂಡು ನೋಡಿದ ಮಾತ್ರದಲಿ ತನು ।
ದಿಂಡುಗೆಡಹಿದನರನ ಪಾವನವಾಳ್ಪರಾಕ್ಷಣದಿ ॥ ೧ ॥

ಈ ನಿಮಿತ್ತ ಪುನಃ ಪುನಸ್ಸು ।
ಜ್ಞಾನಿಗಳ ಸಹವಾಸ ಮಾಡು ಕು– ।
ಮಾನವರ ಕೂಡಾಡದಿರು ಲೌಕಿಕಕೆ ಮರುಳಾಗಿ ॥

ವೈನತೇಯಾಂಸಗನ ಸರ್ವ– ।
ಸ್ಥಾನದಲಿ ತನ್ನಾಮರೂಪವ ।
ಧೇನಿಸುತ ಸಂಚರಿಸು ! ಇತರಾಲೋಚನೆಯ ಬಿಟ್ಟು ॥ ೨ ॥

—ಮಹಲಿಂಗರಂಗ

—o—

## [ ೧೭ ]
## ಭಕ್ತರ ನೆರೆಯಿಂದ ಮುಕ್ತಿ

ಸತ್ಯವಂತರು ನೀನು ಸತ್ತರೆಂದೆನಬೇಡ ।
ಹೆತ್ತಮ್ಮ ಮಗನ ಕರೆವಂತೆ ನಿನ್ನನವ ।
ರೆತ್ತಿಕೊಂಬುವರು ಸರ್ವಜ್ಞ ॥ ೧ ॥

ಸತ್ಯರಾ ನುಡಿ ತೀರ್ಥ, ಸತ್ಯರಾ ನಡೆತೀರ್ಥ ।
ಉತ್ತಮರ ಸಂಗವದು ತೀರ್ಥ ಹರಿವನೀ– ।
ರೆತ್ತಣದು ತೀರ್ಥ ಸರ್ವಜ್ಞ ॥ ೨ ॥

ಏನಾದರೂ ಕೊಟ್ಟು ಜ್ಞಾನಿಯಾ ಕಳೆಕೊಳ್ಳು ।
ಜ್ಞಾನಹೀನನಾ ಕಳೆಗೊಂದು ವಣವಿತ್ತು ।
ನೀನತ್ತು ಕಳುಹು ಸರ್ವಜ್ಞ ॥ ೩ ॥

ಒಂದೊಂದು ಹನಿ ಬಿದ್ದು ನಿಂದಲ್ಲಿ ಮಡವಕ್ಕು ।
ಸಂದ ಸತ್ಪುರುಷರೊಡನಾಡೆ ಪೊರಬೊಮ್ಮ ।
ಮುಂದೆ ಬಂದಕ್ಕು ಸರ್ವಜ್ಞ ॥ ೪ ॥

ಭಕ್ತರೊಡನಾಡುವದು ! ಭಕ್ತರೊಡಗೂಡುವದು ।
ಭಕ್ತಿಯೊಳು ಬಿಡದೆ ಬೆರೆದಿರ್ದ ಭಕ್ತನು ।
ಮುಕ್ತನಾಗಿಹನು ಸರ್ವಜ್ಞ ॥ ೫ ॥

—ಸರ್ವಜ್ಞ

—o—

## ( ಇ ) ವಚನಗಳು:-—

### ( ೩೧ )

### ಬಲ್ಲವರ ಸಂಗದಿಂದ ಬೆಣ್ಣೆಯ ಪ್ರಾಪ್ತಿ

ಅರಿಯ ದವರೊಡನೆ ನಂಗವ ಮಾಡಿದರೆ,
ಕಲ್ಲು ಹೊಯ್ದು ಕಿಡಿಯ ತೆಗೆದು ಕೊಂಬಂತೆ
ಬಲ್ಲವರೊಡನೆ ಸಂಗವ ಮಾಡಿದರೆ
ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ
**ಚನ್ನ ಮಲ್ಲಿಕಾರ್ಜುನಯ್ಯ** ನಿಮ್ಮ ಶರಣರ ಸಂಗ
ಕರ್ಪೂರ ಗಿರಿಯ ಉರಿ ಕೊಂಡಂತೆ

### ( ೩೨ )

### ಸಂಗದಿಂದ ಸರ್ವ ಸುಖ

ನಂಗದಿಂದಲ್ಲದೆ ಅಗ್ನಿ ಹುಟ್ಟದು
ಸಂಗದಿಂದಲ್ಲದೆ ಬೀಜ ಮೊಳೆಯದು
ನಂಗದಿಂದಲ್ಲದೆ ದೇಹವಾಗದು
ನಂಗದಿಂದಲ್ಲದೆ ನರ್ವನುಖದೋರದು
**ಚನ್ನ ಮಲ್ಲಿಕಾರ್ಜುನ** ದೇವಯ್ಯ ।
ನಿಮ್ಮ ಶರಣರ ಅನುಭಾವನಂಗದಿಂದಾನು
ಪರಮ ಸುಖಿಯಾದೆನು

### ( ೩೩ )

### ಆತ್ಮವಾತ್ಮ ಮಂಥನದಿಂದ ಅನುಭಾವ

ಮರ ಮರ ಮಥನಿಸಿ ಕಿಚ್ಚ ಹುಟ್ಟಿ,
ಸುತ್ತಣ ತರುಮರಾದಿಗಳ ಸುಡಲಾಯ್ತು
ಆತ್ಮವಾತ್ಮ ಮಥನಿಸಿ ಅನುಭಾವ ಹುಟ್ಟಿ,
ತನು ಗುಣಾದಿಗಳ ಸುಡಲಾಯ್ತು
ಇದುಕಾರಣ, ನಿಮ್ಮ ಮಹಾನುಭಾವಿಗಳ ಅನುಭಾವ ತೋರಿ,
ಎನ್ನೊಡಲ ನುಳುಹಿಕೊಳ್ಳಾ **ಚನ್ನಮಲ್ಲಿಕಾರ್ಜುನಾ**

( ೩೪ )

**ತನು ಮನಶುದ್ಧಿ**

ಅಯ್ಯ ! ನಿಮ್ಮನುಭಾವಿಗಳ ಸಂಗದಿಂದ,
ಎನ್ನ ತನು ಶುದ್ಧವಾಯಿತು
ಅಯ್ಯ ! ನಿಮ್ಮನುಭಾವಿಗಳ ಸಂಗದಿಂದ,
ಎನ್ನ ಮನ ಶುದ್ಧವಾಯಿತು
ಅಯ್ಯ ! ನಿಮ್ಮನುಭಾವಿಗಳನೊರೆದೊರೆದು
ಆಗು ಮಾಡಿದ ಕಾರಣ,
**ಚನ್ನ ಮಲ್ಲಿಕಾರ್ಜುನ** ನಿಮಗಾನು
ತೊಡಿಗೆಯಾದೆನು

( ೩೫ )

**ಸಜ್ಜನರದು ಪರುಷ ಸ್ಪರ್ಶ**

ಜ್ಞಾನದ ಬಲದಿಂದ, ಅಜ್ಞಾನ ಕೆಡುವುದು ನೋಡಯ್ಯ
ಜ್ಯೋತಿಯ ಬೆಳಗಿಂದ, ಕತ್ತಲೆ ಕೆಡುವುದು ನೋಡಯ್ಯ
ಪರುಷದ ಬಲದಿಂದ, ಅವಲೋಹ ಕೆಡುವುದು ನೋಡಯ್ಯ
**ಕೂಡಲ ಸಂಗನು** ದೇವಯ್ಯ, ನಿಮ್ಮನುಭಾವಿಗಳಸಂಗದಿಂದ
ಎನ್ನ ಭವ ಕೆಡುವದು ನೋಡಯ್ಯ

( ೩೬ )

**ಶರಣರ ಸರಸ ಸಮ್ಮೇಲನ**

ಆಡುವುದು, ಪಾಡುವುದು;
ಕೇಳುವುದು, ಹೇಳುವುದು;
ನಡೆವುದು, ನುಡಿವುದು;
ಸರಸ ಸಮ್ಮೇಳವಾಗಿಪುದಯ್ಯ ಶರಣರೊಡನೆ
**ಚನ್ನ ಮಲ್ಲಿಕಾರ್ಜುನ** ದೇವಯ್ಯ,
ನೀಕೊಟ್ಟ ಆಯುಷ್ಯ ವುಳ್ಳನಕ,
ಲಿಂಗಸುಖಿಗಳ ಸಂಗದಲ್ಲಿ ದಿನಗಳ ಕಳೆವೆನು

## ( ೩೭ )

## ಶರಣ ಸೇವೆಯ ರೀತಿ

ಎತ್ತಪ್ಪೆ ಶರಣಂಗೆ, ತೊತ್ತಪ್ಪೆ ಶರಣಂಗೆ
ಭೃತ್ಯನಾಗಿ ಸದ್ಭಕ್ತರ ಮನೆಯ,
ಬಾಗಿಲ ಕಾಯ್ದಿಪ್ಪ ಸೊಣಗನಪ್ಪ
ಕರ್ತಾರ ! ನಿನಗೆ ಕರವೆತ್ತಿ ಪೊಡಮಡುವ
ಭಕ್ತರ ಮನೆಯ ಹಿತ್ತಲ ಬೇಲಿಯಾಗಿಪ್ಪೆನೈ **ರಾಮನಾಥಾ**

## ( ೩೮ )

## ಶರಣರ ಮೇಲ್ಮೆ

ಚಂದ್ರನ ಶೈತ್ಯದಲ್ಲಿ ಬೆಳೆವ ಕಾಯಕ್ಕೆ,
ಬೆಳದಿಂಗಳ ಬಯಸುವ ಹಂಗೇಕಯ್ಯ !
ಶರಣರ ಸಂಗದಲ್ಲಿದ್ದು, ಶಿವನ ಬೇಡುವ ಹಂಗೇಕಯ್ಯ !
**ಕೂಡಲ ಸಂಗನ** ಶರಣರು ಬಂದು,
ತಮ್ಮವನೆಂದರೆ ಸಾಲದೇ ಅಯ್ಯ !

## ( ೩೯ )

## ಶರಣರ ಬರವು ಹಿಗ್ಗಿನ ಬರವು

ಸಾಸಿವೆಯ ಮೇಲೆ ಸಾಗರವರಿದಂತಾಯಿತ್ತಯ್ಯ !
ಆನಂದದಿಂದ ನಲಿನಲಿದಾಡುವೆನು
ಆನಂದದಿಂದ ಕುಣಿಕುಣಿದಾಡುವೆನು
**ಕೂಡಲ ಸಂಗನ** ಶರಣರು ಬಂದರೆ,
ಉಬ್ಬಿ ಕೊಬ್ಬಿ ಹರುಷದಲೋಲಾಡುವೆನು

## ( ೪೦ )

## ಶರಣರು ಎನ್ನ ಪ್ರಾಣ

ಸೂರ್ಯನುದಯ ತಾವರೆಗೆ ಜೀವಾಳ
ಚಂದ್ರಮನುದಯ ನೈದಿಲೆಗೆ ಜೀವಾಳ

ಕೂಪರ ರಾವಿನಲ್ಲಿ ಕೂಟ ಜೀವಾಳವಯ್ಯ !
ಒಲಿದ ರಾವಿನಲ್ಲಿ ನೋಟ ಜೀವಾಳವಯ್ಯ !
**ಕೂಡಲ ಸಂಗನ** ಶರಣರ ಬರವೆನಗೆ,
ಪ್ರಾಣ ಜೀವಾಳವಯ್ಯ !

( ೪೧ )

**ಅವರಿಂದ ಎನ್ನ ಕುಲ ಪಾವನ**

ಹರಿಶರಣರು ಎನ್ನ ಮನೆಗೆ ಬಂದರೆ,
ಪಾವನ್ನ ವಾಗೋದು
ಹರಿಶರಣರು ಎನ್ನ ಕೂಡ ಮಾತಾಡಿದರೆ,
ತನುತಾಪ ಹೋಗೋದು
ಹರಿಶರಣರು ಎನ್ನ ಮನೆಯೊಳಗುಂಡರೆ,
ಇಪ್ಪತ್ತೊಂದು ಕುಲ ಪಾವನ್ನ ವಾಗೋದು
ಹರಿ ! ಎನ್ನ ನಗಲದಿರೋ ! ಗದುಗಿನ
ವೀರ ನಾರಾಯಣ **ಪುರಂದರವಿಠಲ**

—೦—

# ಮಕರಂದ

ನಮಾಮಿ ಸದ್ಗುರುಂ ಶಾಂತಂ
ಸಚ್ಚಿದಾನಂದ ವಿಗ್ರಹಮ್
ಪೂರ್ಣಬ್ರಹ್ಮಪರಾನಂದ
ಮೀಶಂ ಸದ್ಭಕ್ತವಲ್ಲಭಂ ॥ ೧ ॥

—o—

ಗುರು–ಚರಣಾಂಬುಜನಿರ್ಭರಭಕ್ತಃ
ಸಂಸಾರಾದ ಚಿರಾದ್ಭವ ಮುಕ್ತಃ ।
ಸೇಂದ್ರಿಯ ಮಾನಸ ನಿಯಮಾದೇವಂ
ದ್ರಕ್ಷ್ಯಸಿ ನಿಜಹೃದಯಸ್ಥಂ ದೇವಂ ॥ ೨ ॥

—ಚರ್ಪಟ ಪಂಜರಿಕಾ

—o—

ಉತ್ತಿಷ್ಠತ ! ಜಾಗ್ರತ !
ಪ್ರಾಪ್ಯ ವರಾನ್ನಿ ಬೋಧತ !
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ।
ದುರ್ಗಂ ಪಥಸ್ತತ್ಕವಯೋ ವದಂತಿ ॥ ೩ ॥

—ಕಠ

—o—

—೨೯—

## ಗುರುವಿನ ವರಕರುಣ

( ರಾಗ—ಭೂಪ ದಾದರಾ )

ಮೂರು ವಿಧದಿ ಶಿಷ್ಯರಿಂಗೆ
ಚಾರು ಬ್ರಹ್ಮಬೋಧೆಗೈವ
ಧೀರ ಗುರುವಿನಮಳ ಮಹಿಮೆ ಬಹಳ ಚೋದ್ಯವು ॥ ಪ ॥

ಗುರುವಿನಾಜ್ಞೆಯನ್ನು ಮೀರ
ದಿರುವ ಶಿಷ್ಯನನ್ನು ಒಮ್ಮೆ
ಕರುಣದಿಂದ ನೋಡೆ ಶರಧಿಯೊಳಗಣಂಡವ ।
ಹರಿವ ಮತ್ಸ್ಯ ಕಂಡಕ್ಷಣದೊ-
ಳಿರದ ಮತ್ಸ್ಯವಾಗ್ವ ಹಾಂಗು
ಗುರುವೆ ಆಗಿ ಚರಿಸುತಿಪ್ಪ ಸ್ವಪ್ರಕಾಶದಿ ॥ ೧ ॥

ದಿನವು ಸೇವೆಗೈಯುತಿರಲು
ಮನದಿ ನೆನೆಯೆ ಶಿಷ್ಯನನ್ನು
ಘನದಿ ಜಲದೊಳಿರುವ ಕಮಠ ಒಂದು ದಿವಸದಿ ।
ನೆನೆದ ಕ್ಷಣದೊಳಂಡವೊಡೆದು
ವಿನುತ ಕಮಠವಾಗುವಂತೆ
ಅನುಪಮದ್ವಯ ಗುರುವೆ ಆಗಿ ಚರಿಸುತಿರ್ಪನು ॥ ೨ ॥

ಗುರುವು ಮುಟ್ಟಲಾಗಿ ಶಿಷ್ಯ
ವರಮು ಗುರವೆ ಆಗುತಿಹನು
ಸ್ಪರಿಶದಿಂದ ಅಂಡವೊಡೆದು ಪಕ್ಷಿಯಾದೊಲು ।
ಧರೆಯೊಳಿಂತು ದೃಷ್ಟಿಧ್ಯಾನ
ಸ್ಪರ್ಶವೆಂಬ ಮೂರು ವಿಧದಿ
ಕರುಣಿಸುವನು ಒಬ್ಬ **ಶ್ರೀಗುರುರಂಗನೆನ್ನಿಸಿ** ॥ ೩ ॥

—ಶಂಕರಾನಂದ

—೦—

—೩೦—

# ಗುರುದೇವನು ಭಕ್ತಿಯ ನೋಡದೆಯೆ ಮುಕ್ತಿಯ ನೀಯುವ

( ರಾಗ—ಭೂಪ ದೀಪಚಂದಿ )

ದೇವನಲ್ಲವೇನೋ । ಸದ್ಗುರು
ಮಹಾದೇವನಲ್ಲವೇನೋ ॥ ಪ ॥

ಆದಿಯೊಳು ಸಿದ್ಧರು, ಹೋದ ದಾರಿಯ ತೋರಿ
ಭೇದವ ಬಿಡಿಸಿದ ಸಾಧುಮೂರುತಿ ಗುರು ॥ ಅ ॥

ನರಜನ್ಮದೊಳಗೆ ಬಂದು, ಪ್ರಪಂಚದ,
ಕಡಲ ಮಧ್ಯದಲಿ ನಿಂದು ।
ಅರಿತು ಮರೆತು ಒಮ್ಮೆ ಗುರುವೆಂದು ನೆನೆದರೆ
ಗುರುತಿಟ್ಟು ಅವರಿಗೆ ಪರತತ್ವ ತೋರುವ ॥ ೧ ॥

ಆಶಾ ಪಾಶವ ಬಿಡಿಸಿ, ಮಾಡಿದ ಬಹು,
ದೋಷ ಕರ್ಮವ ಕೆಡಿಸಿ ।
ನ್ಯಾಸ ಧ್ಯಾನದಿ ಜಪಮಾಡೆಂದು ಬೋಧಿಸಿ,
ಪ್ರಕಾಶ ತೋರಿದ ಈಶ ಮಹೇಶನು ॥ ೨ ॥

ಭಕ್ತಿ ಭಾವವ ನೋಡದೆ, ನಂಬಿದವರಿಗೆ,
ಮುಕ್ತಿಯ ಪಾಲಿಸುವ ।
ಕರ್ತ ಸದ್ಗುರು**ಭವತಾರಕ** ದೇವನು
ಪ್ರತ್ಯಕ್ಷ ವಾದಂಥ ಪರಬ್ರಹ್ಮರೂಪನು ॥ ೩ ॥

—**ಭವತಾರಕ**

—೦—

—೩೧—

## ಸದ್ಗುರುವು ಅನಾಥ ಬಂಧು

(ರಾಗ—ಭೂಪ ಝಂಪೆತಾಳ)

ಅಹುದಹುದನಾಥ ಬಂಧು । ಅನುಪಮ್ಯ- ।
ಮಹಿಮ ಕಾರುಣ್ಯ ಸಿಂಧು ॥ ಪ ॥

ಏನೆಂದು ಪೇಳಲೆಮ್ಮಾ । ಈ ದಯಕೆ ।
ತಾನುಪಮೆ ಯಿಲ್ಲವಮ್ಮಾ ॥ ಅ ॥

ನ್ಯೂನಾರಿನದೆ ಯೊಂದಸೂ । ಕ್ಷಮೆಯಿಂದ ।
ತಾನಾಗಿ ಸಲಹು ತಿಹನು ॥
ಜ್ಞಾನವಿಲ್ಲದ ತರಳನೆಂದುಪೇಕ್ಷಿಸದೆನ್ನ ।
ತನ್ನಂಘ್ರಿ ನೆನವಿನಲಿ ಮನ ನಿಲಿಸಿದಮ್ಮಾ ॥ ೧ ॥

ಪತಿತರೊಳು ಪತಿತಾಧಮಾ । ಆಮೇಲೆ ।
ಮತಿಹೀನ ಮೂಢ ಪರಮಾ ॥
ಗತಿಗೈದರೊಂದೊಂದು ವ್ರತದಿ ಮೊದಲಾದವರು ।
ಕ್ಷಿತಿಯೊಳಗೆ ಎನ್ನಂತೆ ಶೂನ್ಯರಾರಮ್ಮಾ ॥ ೨ ॥

ನೆಲೆಗೆ ಮುಯ್ಯಕೆ ಮುಯ್ಯವು । ಈ ತೆರದಿ ।
ನಲೆ ನಡತೆಯುಂಟು ಕೆಲವು ॥
ಒಲಿದು **ಮಹಿಪತಿ ಸುತನ** ಕರಪಿಡಿದು ತನ್ನ ದಾ- ।
- ಸರ ದಾಸನೆನಿಸಿದಾ ಬಿರುದಿವನದಮ್ಮಾ ॥ ೩ ॥

—ಕೃಷ್ಣರಾಯ

—೦—

— ೩೨ —

## ಗುರು ಉಪದೇಶವ ನಾಲಿಸು

( ರಾಗಃ— ನಾದನಾಮಕ್ರಿಯೆ ಆದಿತಾಳ )

ಶ್ರೀ ಗುರು ವಚನೋಪ ದೇಶವನಾಲಿಸಿ ।
ದಾಗಳಹುದು ನರರಿಗೆ ಮುಕುತಿ ॥ ಪ ॥

ದುರಿತ ಕರ್ಮವ ನೊಲ್ಲದಿರು ಪುಣ್ಯವನೆ ಮಾಡು ।
ಹರನಡಿವಿಡಿ ಕಾಂತರೊಡನಾಡು ॥
ಕರುಣವಿರಲಿ ಜೀವರೊಳು ನೀತಿ ವಿದನಾಗು ।
ಪೊರೆ ಪೊರ್ದಿದರ ನೆಂದು ಬೆಸಸುವ ॥ ೧ ॥

ನಿಂದಿಸಿ ನುಡಿಯದಿರಾರನು ಮನಸಿಗೆ ।
ಬಂದಂತೆ ನಡೆಯದಿರಿಹದಲ್ಲಿ ॥
ಕುಂದು ಪಡೆಯದಿರು ಕಾಮಾದಿಗಳ ಜಯಿ ।
ಸೆಂದು ಕೈಪಿಡಿದನುಗ್ರಹಿಸುವ ॥ ೨ ॥

ಭವ ಮಾಲೆಗಲಸು ಪುಸಿಯುವಿರೆಡರು ಬಂದು ।
ಕವಿಯಲಂಜದಿರು ಸಂಪದದೊಳು ॥
ತವೆ ಮದವಳಿದಿರು ತತ್ವ ಸಂತತಿಯನು ।
ವಿವರಿಸಿ ನೋಡೆಂದು ತಿಳಿಪುವ ॥ ೩ ॥

ಬಳಸದಿರದ್ವೈತವನು ಬಾಹ್ಯದಲ್ಲಿ ನಿಂ।
ನೊಳಗೇಕೋ ಭಾವನೆಯೊಳ ಗೂಡು ॥
ತಿಳಿದು ನಮಯ ನಿಷ್ಠೆಗಲಿ ವೇದವಿದ ಭಕ್ತಿ ।
ಗಳ ನಗಲದಿರೆಂದುಸುರುವ ॥ ೪ ॥

ಆರು ನಾನೆಂದು ವಿಚಾರಿಸು ವಿಷಮ ಸಂ ।
ಸಾರವಿದನು ಕನಸೆಂದರಿ ॥
ಮಾರ ಮರ್ದನ **ಶಂಭು ಲಿಂಗವ** ನೊಲಿಸಿ ಗಂ ।
ಭೀರ ಸುಖದೊಳಿರೆಂದರುಪುವ ॥ ೫ ॥

— ನಿಜಗುಣಿ

—೩೩—

## ಗುರು ಚರಣ ಕಮಲದಲಿ ಭೃಂಗನಾಗು

( ರಾಗ — ಜಯ ಜಯ ವಂತಿ ಝಂಪೆ ತಾಲ )

ಗುರು ಚರಣ ಕಮಲದಲಿ,
ಭೃಂಗ ನಾಗೋ ನೀ ॥ ಪ ॥

ಸ್ಥಿರವಿಲ್ಲ ಸಂಸಾರ,
ನರಜನ್ಮ ದೊಳು ಬಂದು ।
ಪರತತ್ವ ತಿಳಿದು ಸಾ -
ಧುರ ಸಂಗಿಯಾಗೊ ನೀ ॥ ೧ ॥

ಮೌನ ಹಿಡಿದು ಮುದ್ರೆ ಒಲಿದು,
ಜ್ಞಾನ ಜ್ಯೋತಿಯೊಳಗೆ ನಲಿದು ।
ಸ್ವಾನು ಭವಾಮೃತ ಸವಿದು,
ನಿಸ್ಸಂಗನಾಗೊ ನೀ ॥ ೨ ॥

ಮುಪ್ಪಿನ ಮುನಿಯ ಪಿಡಿದು ವಚನ
ಕಪ್ಪು ಗೊರಳ ಕಾಡಸಿದ್ಧ ।
ನಿದ್ದೆಡೆಗೆ ಹೋಗಿ -
ಸಾಷ್ಟಾಂಗನಾಗೊ ನೀ ॥ ೩ ॥

— ನಿಂಬರಗಿ ಮಹಾರಾಜ

—೦—

— ೩೪ —

## ಪರಮಾತ್ಮನನ್ನು ತೋರುವ ಗುರುವಿನ ಉಪಕೃತಿಯನ್ನು ಮರೆಯುವದೆಂತು ?

(ರಾಗ—ಭೂಪ ದೀಪಚಂದಿ)

ಗುರುದೇವ ನೀ ಮಾಡಿದುಪಕೃತಿಯನು ನಾನು
ಮರೆಯೆನು ಎಂದಿಗೂ ಇಹದೊಳು ॥ ಪ ॥

ಪೊಡವಿಯೊಳಖಿಳ–ವೇದಾಗಮ ಶಾಸ್ತ್ರಗಳ
ಬಿಡದೆ ಸಾಧಿಸಿದ ವಾದಿಗಳೆಲ್ಲ ।
ಹೊಡೆದಾಡಿ ಕಾಣದಾ ಪರತತ್ವವನು ನೀನು
ತಂದೆನ್ನ ಕರಕೆ ಕೊಟ್ಟಿದರಿಂದೆ ॥ ೧ ॥

ಕಂದಮೂಲಗಳ ಸೇವಿಸಿ ವಾಯುಗಳನೊತ್ತಿ
ಬಂಧಿಸಿ, ಪಂಚಾಗ್ನಿ ಮಧ್ಯದಲಿ ।
ನಿಂದು ಯೋಗಿಗಳು ನೋಡನಾ ಪರಬ್ರಹ್ಮ–
ತಂದೆನ್ನ ಕಣ್ಣಿಗೆ ತೋರಿದರಿಂದ ॥ ೨ ॥

ತರಳ ಎನ್ನಯ ಮೇಲೆ ದಯ ಹುಟ್ಟಿ ಶಿವನೆ
**ಶ್ರೀ ಗುರುಸಿದ್ಧ**ನೆಂಬ ನಾಮವನಾಂತು ।
ಗುರುರೂಪದೆಂದೆನ್ನ ಬೋಧಿಸಿ ತನ್ನೊಳು
ಬೆರಸುತ್ತೆ ಮೋಕ್ಷವಿತ್ತುದರಿಂದ ॥ ೩ ॥

—ಸರ್ಪಭೂಷಣ

—೦—

## (ಆ) ಪದ್ಯಗಳು:—

### [ ೧೮ ]
### ಶ್ರೀ ಸದ್ಗುರು ಸ್ತವನ

ಶ್ರೀ ಗುರುವೆ ನಿಜಸುಖದ ಸಾಗರವೆ ತೆರೆಮನಗು ।
ತಾಗಳುಂ ಬೆಳಗುತಿಹ ನಿನ್ನ ಕಡೆಗಣ್ಣ ।
ಳೀಗೆ ಸಂತಸವನಖಿಳರ್ಗೆ ॥ ೧ ॥

ನೋಡಿ ಕೆಲರಂ ಮಾತನಾಡಿ ಕೆಲರಂ ಮುಟ್ಟಿ ।
ಕೂಡೆ ಕೆಲಜೀವರನು ದೇವರಾಗಿ ಮಿಗೆ ।
ಮಾಡುವಾಚಾರ್ಯ, ಶರಣಾಗು ॥ ೨ ॥

ತರಣಿ ಶಶಿ ರೋಚಿಗಳ ಕಿರಣಂಗಳೈದಿ ಸಂ ।
ಹರಿಸದಜ್ಞಾನ ತಿಮಿರಮಂ ಕೆಡಿಸುವದು ।
ಗುರುವರ್ಯ ನಿನ್ನ ನನು ನೋಟ ॥ ೩ ॥

ಶರಣು ಗುರುಕುಲಭಾನು ಶರಣುನತಸುರಧೇನು ।
ಶರಣು ನಿಮಗಾನು ಪರನಲ್ಲ ಪಿನ್ನೇನು ।
ಶರಣು ಮಿಗೆ ಶರಣು ಗುರುವರ್ಯ ॥ ೪ ॥

ಗುರುಪುಂಗವನೆ ನಿನ್ನೊಳುರವಣಿಸಿ ಮುಂಚುತಿಹ ।
ಕರಣಾಂಬುವೆನ್ನ ಮನದಮಲಿನ ದೊಳೆಯೆ ।
ಪರಿಶುದ್ಧನಾದೆನಿದುಸತ್ಯ ॥ ೫ ॥

ತವಪಾದರೇಣುವೆಂಬ ವಿಭೂತಿಯಿಂದೆನ್ನ ।
ನವಿರತಂ ಭ್ರಾಂತಿ ಗೊಳಿಸುವ ಜ್ಞಾನ ಗ್ರ ।
ಹವೆ ಪಿಂಗಿತಾತ್ಮರತ ವಂದ್ಯ ॥ ೬ ॥

ಪರಮಾತ್ಮ ನಿಮ್ಮ ಪದಸರಸಿಜಾಮೋದವದು ।
ಪರಿದೆನ್ನೊಳಿರ್ದ ದುರಿತ ದುರ್ವಾಸನೆಯ ।
ನೊರಿಸಲಾನಿಂದು ಶುಚಿಯಾದೆ ॥ ೭ ॥

ಮಂಗಳಾತ್ಮಕೆ ನಿನ್ನ ಸಂಗದಿಂದೆನ್ನ ಕರ - ।
ಣಂಗಳಂ ಮರವೆ ಮುಸುಕದಾ ರವಿಯ ತೆರ ।
ಗಂಗಳಿಗೆ ತಿಮಿರ ಭಯವೆಂತು ॥ ೮ ॥

ಬೆಲ್ಲಮಂ ಕೂಡಿ ಬೇವೆಲ್ಲ ವಿನಿದಪ್ಪಂದ ।
ದಲ್ಲಿ ನಿನ್ನೊಲುಮೆ ವೆರೆದೆನ್ನ ಮತಿಮರವೆ ।
ಯಿಲ್ಲದಾಯ್ತು ಸುಖರೂಪ ॥ ೯ ॥

ಶ್ರೀ ಗುರುವೆ ನಿಮ್ಮ ವಚನಾಗಮ ಪಯೋಸಿಧಿಯ ।
ನೀಗಳಾನ್ಯೆದಿ ಸುಖಸುಧಾರಸವನ್ನು ।
ಭೋಗಿಸುತ್ತಮೃತ ಮಯನಾದೆ ॥ ೧೦ ॥

— ನಿಜಗುಣಿ

—೦—

## [ ೧೯ ]
## ಸನ್ಮತಿ ದೋರು

ಪರಮ ವರಂಜ್ಯೋತಿ ಕೋಟಿ ಚಂದ್ರಾದಿತ್ಯ ।
– ಕಿರಣ ಸುಜ್ಞಾನ ಪ್ರಕಾಶಾ ॥
ಸುರರ ಮುಕುಟ ಮಣಿರಂಜೀತ ಚರಣಾಬ್ಜ ।
ಶರಣಾಗು ಪ್ರಥಮ ಜೀವೇಶಾ ॥ ೧ ॥

ನೋಡಿ ನೋಡದ ನುಡಿದಾಡಿ ನುಡಿಯದೆಡೆ ।
ಯಾಡಿ ನಡೆಯದ ಮಹಾತ್ಮಾ ॥
ಕೂಡೆ ಕೂಡೆನಗೆ ಚಿತ್ಕಳೆಯ ಬೆಳಕನುಂಟು ।
ಮಾಡು ನಿರಂಜನ ಸಿದ್ಧಾ ॥ ೨ ॥

ಒಳವರಿದಾತ್ಮ ದೃಷ್ಟಿಯೊಳು ನೋಡಿದರೆ ಮ್ಮೆ - ।
ಯೊಳಗೊಂದು ಪ್ರಭೆಯೆ ಮೈಯ್ಯಾಗಿ ॥
ಹೊಳೆವ ಚಿನ್ಮಯನೆ ಸನ್ಮತಿದೋರು ತ್ರಿಭುವನ ।
ತಿಲಕ ನಿರಂಜನ ಸಿದ್ಧಾ ॥ ೩ ॥

ಎತ್ತ ನೋಡಿದತ್ತ ಮೊತ್ತದ ಪ್ರಭೆಯಾಗಿ ।
ಚಿತ್ತದೊಳೆಸವ ಚಿದಾತ್ಮಾ ॥
ಬಿತ್ತರಿಸೆನಗೆ ಸನ್ಮತಿಯನು ಮೋಕ್ಷದ - ।
ಬಿತ್ತೆ ನಿರಂಜನ ಸಿದ್ಧಾ ॥ ೪ ॥

ಕಾಣುತರಿವುತ ಮೈಗವಸಣಿಗೆಯೊಳಿಹ - ।
ಮಾಣಿಕ್ಯ ಮುಕುರುವೆ ಸ್ವಾಮೀ ॥
ಕಾಣಿದು ನನಗೆ ಸನ್ಮತಿದೋರು ನಿತ್ಯಕ - ।
ಲ್ಯಾಣಿ ನಿರಂಜನ ಸಿದ್ಧಾ ॥ ೫ ॥

ಉಸುರೆಂಬ ಕರಗಸದಿಂದ ದೇಹಾತ್ಮರ ।
ಬೆಸುಗೆಯ ಬಿಡಿಸಿ ನೋಡಿದರೆ ॥
ಮುಸುಳದೆ ತೋರ್ಪ ಮಹಾತ್ಮ ನೀನೆಸೆಗೊಳ್ಳ ।
ನೆಸಗು ನಿರಂಜನ ಸಿದ್ಧಾ ॥ ೬ ॥

ಪರಮ ಗುರುವೆ ಪರಮಾರಾಧ್ಯ ಜಯ ! ಪರಾ - ।
ತ್ಪರ ವಸ್ತು ನಿನಗೆ ನಮೋಸ್ತು ॥
ಪರಿಪಾಲಿಸೆನಗೆ ಸನ್ಮತಿಯನು ಸೌಖ್ಯ ತ - ।
ತ್ಪರನೆ ನಿರಂಜನ ಸಿದ್ಧಾ ॥ ೭ ॥

ಒಡಲು ಬೇರಾತ್ಮ ಬೇರೆಂಬ ತತ್ವಾರ್ಥವ ।
ನುಡಿನುಡಿದೆಲ್ಲರ ಮನದ ॥
ಜಡವ ಜಾರಿಸುವ ಜಗನ್ನಾಥ ಜಾಣ್ಮೆಯ - ।
ನುಡಿಸು ನಿರಂಜನ ಸಿದ್ಧಾ ॥ ೮ ॥

ಬಯಲಲಿ ಬರೆದ ಪುರುಷರೂಪೊ ಪ್ರಭೆಯ ಬೊಂ - ।
ಬೆಯೊ ಯೆನೆ ತೋರ್ಪಸ್ವರೂಪಾ ॥
ಜಯ ಜಯ ಗುರುವೆ ! ಸನ್ಮತಿ ದೋರು ಲೋಕವಿ - ।
ಸ್ಮಯನೆ ನಿರಂಜನ ಸಿದ್ಧಾ ॥ ೯ ॥

ಅಚ್ಚ ಬೆಳ್ದಿಂಗಳ ಬೊಂಬೆಯೊಯೆನೆ ಮನ - ।
ಕಚ್ಚರಿದಾವಾಗ ತೋರ್ವ ॥
ಸಚ್ಚಿದಾನಂದ ಸನ್ಮತಿ ದೋರು ಭವ್ಯರ - ।
ಮೆಚ್ಚೆ ನಿರಂಜನ ಸಿದ್ಧಾ ॥ ೧೦ ॥

ಬಯಲ ಪುರುಷ ಬಯಲಾಕಾರ ಒಕ್ಕಟ ।
ಬಯಲ ರೂಪನೆ ಬಯಲಾಂಗಾ ॥
ಬಯಲಾಧಾರನೆ, ಮತಿದೊರು ನಿಚ್ಚನಿ- ।
ರ್ವಯಲ ನಿರಂಜನ ಸಿದ್ಧಾ ॥ ೧೧ ॥

ತಿಳಿವೆಳಗಿನ ತೀರ್ಥ ರೂಪನೆ ತಿಂಗಳ ।
ಬೆಳಗಿನೊಳಾದ ಪುತ್ತಳಿಯೆ ॥
ತಿಳುಮಾಡದೆನಗೆ ಸನ್ಮತಿ ದೋರು ಸುಜ್ಞಾನ ।
ನಿಶಿಯಾ ನಿರಂಜನ ಸಿದ್ಧಾ ॥ ೧೨ ॥

— ರತ್ನಾಕರ

—೦—

## [ ೨೦ ]
## ಅಂತರಂಗದೊಳಿರು

ಅಭಿಮತ ಸಿದ್ಧಿದಾಯಕ ಯೋಗಿನಾಯಕ ।
ಉಭಯ ಲಾವಣ್ಯ ವರೇಣ್ಯ ॥
ಪ್ರಭೆ ತೋರುತೆನ್ನಂತರಂಗದೊಳಿರು ಬೋಧ - ।
ವಿಭುವೆ ಚಿದಂಬರ ಪುರುಷಾ ॥ ೧ ॥

ಸುಖ ದುಃಖವೆಂಬ ವಿಕಲ್ಪವಳಿದು ದಿವ್ಯ ।
ಸುಖವೆ ರೂಪಾದ ಮಹಾತ್ಮಾ ॥
ಸುಖ ದೋರುತೆನ್ನಂತರಂಗದೊಳಿರು ಸುಖ -
ಮುಖನೆ ಚಿದಂಬರ ಪುರುಷಾ ॥ ೨ ॥

ಮೈಯೆಲ್ಲ ಕಣ್ಣು ಮೈಯೆಲ್ಲ ಮನಸು ನಿನ್ನ - ।
ಮೈಯೆಲ್ಲಿ ಬಲು ಸುಖಶಕ್ತಿ ॥
ಮೈಯೆಲ್ಲ ಪ್ರಭೆಯಾದ ಮಹಿಯೆ ನನ್ನೆದೆಯೊಳಿ - ।
- ರಯ್ಯ ಚಿದಂಬರ ಪುರುಷಾ ॥ ೩ ॥

ಬಯಸದೆ ನಿನ್ನ ನೋಡಿದರೆ ಮೂರೋಕ - ವಿ - ।
- ಸ್ಮಯ - ಭೋಗಗಳ ತಂದುಕೊಡುವಾ ॥
ನಿಯಮುದುದಾರ ಶೀಲನೆ ! ನನ್ನೊಳಿರು ಸುಖ - ।
ಮಯನೆ ಚಿದಂಬರ ಪುರುಷಾ ॥ ೪ ॥

ತಳು ಮೇಲು ಪೊರಗೊಳಗೆನ್ನದೆ ಸರ್ವತ್ರ ।
ತಳತಳಿಸುವ ಚಿನ್ಮಯಾಂಗಾ ॥
ಬೆಳಗೇರುತೆನ್ನಂತರಂಗದೊಳಿರು ಸುಖ - ।
ಸುಲಭ ಚಿದಂಬರ ಪುರುಷಾ ॥ ೫ ॥

ತೆರೆಯ ಮೇಲ್ತೆರೆಗಳ ತೋರುವಿಂಗಡಲಂತೆ ।
ಸಿರಿಯಮೇಲ್ಸಿರಿಯ ಸೂಚಿಸುತ ॥
ಚರಿತಾರ್ಥ ನನ್ನಂತರಂಗದೊಳಿರು ಮನೋ - ।
ಹರನೆ ಚಿದಂಬರ ಪುರುಷಾ ॥ ೬ ॥

ನೆನೆದವರಿಗೆ ನೆನೆದರ್ಥ ಸಾರ್ಚುವ ।
ಅನುಪಮಾನಂದ ಸ್ವರೂಪಾ ॥
ಇನಿಸಗಲದೆ ನನ್ನ ಮನದೊಳಿರಮೃತವ– ।
- ರ್ಧನನೆ ಚಿದಂಬರ ಪುರುಷಾ ॥ ೭ ॥

ಮಾತು ಮಾತಿಗೆ ದಿನದಿನಕೆ ಕ್ಷಣಕೆ ನವ - ।
ನೂತನ ಭಾವವ ತೋರ್ಪ ॥
ನಾತಿಶಯಾತ್ಮ ನನ್ನೆದೆಯೊಳಿರಮೃತ ನಿ - ।
ಕೇತಾ ಚಿದಂಬರ ಪುರುಷಾ ॥ ೮ ॥

ನುಡಿಯಿಂದ ನೋಟದಿಂದಾಟದಿಂದ ಘನ ವೆ - ।
- ರ್ವಡೆಯ ತೊತ್ತಳಿದುಳಿದಭವಾ ॥
ಬಿಡದೆ ನನ್ನಂತರಂಗದೊಳಿರು ಕಾಂತಿ ಕಾ - ।
- ಲಿಡುವ ಚಿದಂಬರ ಪುರುಷಾ ॥ ೯ ॥

ಅಂಬರ ಮೈಯಾದ ಪುರುಷ ಸುಜ್ಞಾನವೆ - ।
ತುಂಬಿಮೈಯಾದ ಸತ್ಪುರುಷಾ ।
ತಂಬೆಳಗಿನ ಮೈಯ ಪುರುಷ ನಮೋಸ್ತು ! ಚಿ - ।
ದಂಬರ ಪುರುಷ ಚಿತ್ಪುರುಷಾ ॥ ೧೦ ॥

ಯೋಗ ವಾಗಲಿ ಭೋಗ ವಾಗಲಿ ನಿನ್ನ ಸಂ - ।
ಯೋಗವಾದರೆ ತಾನೆ ಮುಕ್ತಿ ॥
ಶ್ರೀ ಗುರುನಾಥ ನನ್ನೆದೆಯೊಳಿರಲಿ ಮಹಾ - ।
ಭೋಗಿ ಚಿದಂಬರ ಪುರುಷಾ ॥ ೧೧ ॥

ಹಿಂದು ಮುಂದೆಡಬಲ ಪೊರಗೊಳಕಡಿ ಕಡೆ - ।
- ಯೆಂದೆನ್ನದಮೃತ ಸ್ವರೂಪಾ ।
ಎಂದೆಂದು ನನ್ನ ಚಿತ್ತದೊಳಿರು ಸಚ್ಚಿದಾ – ।
ನಂದ ಚಿದಂಬರ ಪುರುಷಾ ॥ ೧೨ ॥

— ರತ್ನಾಕರ

— —

## [ ೨೧ ]

## ಗುರುಗಳ ಗುಣ ಕರ್ಮಸೇವೆ

ವಿದ್ಯೆ ಕಲಿತಡೆ ಇಲ್ಲ ಬುದ್ಧಿ ಕಲಿತಡೆ ಇಲ್ಲ ।
ಉದ್ಯೋಗ ಮಾಡಿದೊಡೆ ಇಲ್ಲ, ಗುರುಮುಖ -
ವಿಲ್ಲದಡಿಲ್ಲ ಸರ್ವಜ್ಞ ॥ ೧ ॥

ತಾಪದಲಿ ಸಂಸಾರ ಕೂಪದಲಿ ಬಿದ್ದವರು ।
ಆಪತ್ತನಳಿದು ಪೊರಮಡಲು ಗುರುವಾದ ।
ಸೋಪಾನವಯ್ಯ ! ಸರ್ವಜ್ಞ ॥ ೨ ॥

ಪರತತ್ವ ತನ್ನೊಳಗೆ ಎರವಿಲ್ಲದಿರುತಿರ್ದು ।
ಪರದೇಶಿಯಂತೆ ಇರುತಿಪ್ಪ ಯೋಗಿಯು ।
ಪರಮ ಗುರುವೆಂಬೆ ! ಸರ್ವಜ್ಞ ॥ ೩ ॥

ಪರಮನಾ ರೂಪದಲಿ ನೆರವೀಯ ಲರಿಯದೆ ।
ನರನಾಗಿ ಬಂದು ವರವೀವ ಗುರುವಿಗೆ ।
ನರಿಯಾರು ಕಾಣೆ ಸರ್ವಜ್ಞ. ॥ ೪ ॥

ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ ।
ಮತ್ತೆ ಪಾದದ ಕೆರವಾಗಿ ಗುರುವಿನಾ ।
ಹತ್ತಲಿರು ಎಂದ ಸರ್ವಜ್ಞ ॥ ೫ ॥

— ಸರ್ವಜ್ಞ

—೦—

## ( ಇ ) ವಚನಗಳು:—

### ( ೪೨ )
### ಶ್ರೀಗುರು ಮುಂದಣ ಪಥವ ತೋರಿದಾ

ಸಂಸಾರ ಸಾಗರದೊಳಗೆ ಬಿದ್ದೆ ನೋಡಾ ನಾನು !
ಸಂಸಾರ ನಿಸ್ಸಾರವೆಂದು ತೋರಿದ ನೆನಗೆ ಗುರು
ಅಂಗವಿಕಾರದ ಸಂಗವ ನಿಲಿಸಿದ, ನೆನ್ನಗುರು
ಹಿಂದಣ ಜನ್ಮವ ತೊಡೆದು ಮುಂದಣ ಪಥವ ತೋರಿದ ನೆನ್ನತಂದೆ
**ಚನ್ನ ಮಲ್ಲಿಕಾರ್ಜುನನ** ತೋರಿದ ನೆನ್ನ ಗುರು

### ( ೪೩ )
### ನರಜನ್ಮ ತೊಡೆದು ಹರಜನ್ಮ ಮಾಡಿದ

ಲಿಂಗವನಂಗದಮೇಲೆ ಸ್ಥಾಪ್ಯವ ಮಾಡಿದ
ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ
ಭವಬಂಧನವ ಬಿಡಿಸಿ ಪರಮಸುಖ ತೋರಿದ ಗುರುವೇ
ಭವಿಯೆಂಬುದ ತೊಡೆದು, ಭಕ್ತಿಯೆಂದೆನಿಸಿದ ಗುರುವೇ !
**ಚನ್ನ ಮಲ್ಲಿಕಾರ್ಜುನನ** ತಂದೆನ್ನ
ಕೈವಶಕ್ಕೆ ಕೊಟ್ಟ ಗುರುವೇ ಶರಣು !

### ( ೪೪ )
### ಗುರುವಿನ ಬರವು ಮುಕ್ತಿಯಬರವು

ನಿತ್ಯವೆನ್ನ ಮನೆಗೆ ನಡೆದು ಬಂದಿತ್ತು
ಮುಕ್ತಿಯೆನ್ನ ಮನೆಗೆ ನಡೆದು ಬಂದಿತು
ಜಯ ಜಯ ಗುರುವೇ ! ನಮೋ ನಮೋ !
ಪರಮ ಗುರುವೇ ! ನಮೋ ನಮೋ !
**ಚೆನ್ನ ಮಲ್ಲಿಕಾರ್ಜುನ** ತಂದೆನಗೆ ಕೊಟ್ಟ -
ಗುರುವೇ ನಮೋ ನಮೋ !

( ೪೫ )

## ಕ್ಷೇತ್ರವ ಶುದ್ಧಮಾಡಿ ಬೀಜವ ಬಿತ್ತುವ

ಒಳಗೆ ಶೋಧಿಸಿ, ಹೊರಗೆ ಶುದ್ಧವಿಸಿ,
ಒಳಹೊರವೆಂಬ ಉಭಯ ಶಂಕೆಯು ಕಳೆದು'
ಸ್ಫಟಿಕದ ಶಲಾಕೆಯಂತೆ ತಿಳಿವೆಳಗು ಮಾಡಿ,
ಸುಕ್ಷೇತ್ರವನರಿದು, ಬೀಜವಬಿತ್ತುವಂತೆ,
ಶಿಷ್ಯನ ಸರ್ವ ಪ್ರಪಂಚ ನಿವೃತ್ತಿಯಂ ಮಾಡಿ,
ನಿಜೋಪದೇಶವಿತ್ತು, ಆ ಶಿಷ್ಯನ
ನಿಜದಾರಿಯನೈದಿಸುವ ಗುರು
ಆ ಸಹಜ ಗುರುವೀಗ ಜಗದಾರಾಧ್ಯರು
ಅವರ ಪಾದಕ್ಕೆ ನಮೋ ನಮೋ !
ಎಂಬೆ ಕಾಣಾ ! **ಚನ್ನ ಮಲ್ಲಿಕಾರ್ಜುನಾ !**

( ೪೬ )

## ಹುಟ್ಟು ಸಾವನ್ನು ಅಳಸುವ

ಗುರು ಕರುಣಿಸಲು ಸಂಸಾರ ವಿಷಯ ಕೆಟ್ಟಿತ್ತು
ಮಾಯಾ ಪ್ರಪಂಚ ಬಿಟ್ಟಿತ್ತು ಹುಟ್ಟು ಸಾವು ಹೊಯಿತ್ತು
ನೆಟ್ಟನೆ ಗುರುಪಾದವ ಮುಟ್ಟಿ ಭವಗೆಟ್ಟೆನು

— ರಾಮನಾಥಾ

( ೪೭ )

## ಗುರು ತನುಗುಣಕ್ಕೆ ಕೆಂಡವಿದ್ದಂತೆ

ಉರಿವ ಕೆಂಡದ ಮೇಲೆ, ತೃಣವ ತಂದಿರಿಸಿದರೆ,
ಆ ತೃಣವನಾ ಕೆಂಡನುಂಗಿದಂತೆ,
ಗುರುಚರಣದ ಮೇಲೆ, ತನುವೆಂಬ ತೃಣವ ತಂದಿರಿಸಿದರೆ,
ಆತನ ಸರ್ವಾಂಗವೆಲ್ಲ ಲಿಂಗ ಕಾಣಾ

— ರಾಮನಾಥಾ

( ೪೮ )

## ಗುರುವು ಯಾರಾದರೇನು ?

ತನ್ನದಾದರೇನು ಕನ್ನಡಿ ಅನ್ಯರದಾದಡೇನು ಕನ್ನಡಿ ?
ತನ್ನ ರೂಪ ಕಂಡದೆ ಸಾಲದೇ ?
ಸದ್ಗುರು ಆವನಾದಡೇನು ?
ತನ್ನನರುಹಿದಡೆ ಸಾಲದೇ ಹೇಳಾ-
ಸೆ **ಮುಲಿಗೆಯ ಚನ್ನರಾಮಾ**

( ೪೯ )

## ಎನ್ನೊಳಗೆ ತನ್ನ ತೋರಿದ

ಎನ್ನ ಕರಸ್ಥಲದ ಮಧ್ಯದಲ್ಲಿ,
ಪರಮ ನಿರಂಜನನ ಕುರುಹದೋರಿದ.
ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳೆತೋರಿದ.
ಆ ಕಳೆಯ ಮಧ್ಯದಲ್ಲಿ, ಮಹಾಜ್ಞಾನದ ಬೆಳಗ ತೋರಿದ.
ಆ ಬೆಳಗಿನ ನಿಲುವಿನೊಳಗೆ ಎನ್ನ ತೋರಿದ.
ಎನ್ನೊಳಗೆ ತನ್ನ ತೋರಿದ.
ತನ್ನೊಳಗೆ ಎನ್ನನಿಂಬಿಟ್ಟುಕೊಂಡ ಮಹಾಗುರುವಿಗೆ
ನಮೋ ನಮೋ ಎನುತಿರ್ದೆನಯ್ಯ **ಅಖಂಡೇಶ್ವರಾ**

( ೫೦ )

## ಗುರುಕರುಣ ದುರ್ಲಭ

ಗುರುಕರುಣವಾಗೋದು ಪರಮ ದುರ್ಲಭವಯ್ಯ !
ಪರಿಪರಿವ್ರತಗಳಾಚರಿಸಿ ಫಲವೇನು ?
ಗುರುಕರುಣವೊಂದಿಲ್ಲದೆ ಗತಿಗೆ ಬೇರುಂಟೆ ?
ಶರೀರದ ಪುತ್ರ ಮಿತ್ರ ಕಲತ್ರ ಬಾಂಧವರು
ನೆರೆ ಸಲಿಸುವರೆ ಸದ್ಗತಿಗೆ ಸಾಧನವ ?
ನಿರುತದಿ ಗುರುಪಾದ ನಿಜವಾಗಿ ಮನದಲ್ಲಿ,

ಅರಿತು ಭಜಿಸಲು, ಅಖಿಳ ಸಂಪದವಿತ್ತು.
ಪರಿಪಾಲಿಸುವ ನಮ್ಮ **ಪುರಂದರ ವಿಠಲ.**

( ೫೧ )

## ಗುರುವಿನಿಂದ ಜ್ಞಾನೋದಯವಾಗಲು ದಾಸೋಹ ಬೇಕು

ಪ್ರಣತೆಯು ಇದೆ, ಬತ್ತಿಯು ಇದೆ.
ಜ್ಯೋತಿಯ ಬೆಳಗುವದೆ, ತೈಲವಿಲ್ಲದೆ ಪ್ರಭೆತಾನೆಲ್ಲಿಯದೋ?
ಗುರುವಿದೆ, ಲಿಂಗವಿದೆ. ಶಿಷ್ಯರ
ಸುಜ್ಞಾನೋದಯ ವಾಗದನ್ನಕ್ಕರ ಭಕ್ತಿ ಎಲ್ಲಿಯದೋ?
ಸೋಹಂಮೆಂಬುದ ಕೇಳಿ ದಾಸೋಹವಮಾಡದಿರ್ದಡೆ
ಅತಿಗಳೆವೆ **ಗುಹೇಶ್ವರಾ!**

( ೫೨ )

## ಅರಿವೆ ಗುರು ಆಚಾರವೇ ಶಿಷ್ಯ

ಅರಿವೇ ಗುರು, ಆಚಾರವೇ ಶಿಷ್ಯ.
ಜ್ಞಾನವೇ ಲಿಂಗ, ಪರಿಣಾಮವೇ ತಪ.
ಸಮತೆಯೆಂಬುದೇ ಯೋಗದಾಗು ನೋಡಾ
ಈಸುವನರಿಯದೆ ಯೋಚು ಬೋಳಾದರೆ,
**ಮಹಾಲಿಂಗ ಕಲ್ಲೇಶ್ವರ ದೇವರು** ನಗುವರು

# ಮಕರಂದ

ಸಂಕಲ್ಪ ಪ್ರಭವಾನ್ ಕಾಮಾನ್
    ತ್ಯಕ್ತ್ವಾ ಸರ್ವಾನಶೇಷತಃ ।
ಮನಸ್ಯೈವೇಂದ್ರಿಯಗ್ರಾಮಂ
    ವಿನಯಮ್ಯ ಸಮಂತತಃ ॥ ೧ ॥

ಶನ್ಯೈಃ ಶನ್ಯೈರುಪರಮೇತ್
    ಬುಧ್ಯಾ ಧೃತಿಗೃಹೀತಯಾ ।
ಆತ್ಮಸಂಸ್ಥಂ ಮನಃ ಕೃತ್ವಾ
    ನ ಕಿಂಚಿದಪಿ ಚಿಂತಯೇತ್ ॥ ೨ ॥

ಪ್ರಶಾಂತಮನಸಂ ಹ್ಯೇನಂ
    ಯೋಗಿನಂ ಸುಖಮುತ್ತಮಂ ।
ಉಪೈತಿ ಶಾಂತರಜಸಂ
    ಬ್ರಹ್ಮಭೂತಮಕಲ್ಮಷಮ್ ॥ ೩ ॥

—ಶ್ರೀಗೀತಾ

ದೀರ್ಘಕಾಲ –ನೈರಂತರ್ಯ ।
ಸತ್ಕಾರಸೇವಿತಃ ದೃಢಭೂಮಿಃ ।

— ಯೋಗಸೂತ್ರ

— ೩೫ —

## ಬೋಧವು ತಿಳಿಯಬೇಕು ಹೊಳೆಯಬೇಕು ಉಳಿಯಬೇಕು

(ರಾಗ—ಲಾವಣಿ)

ತಿಳಿಸುವ ಮಾತಲ್ಲಾ । ತಿಳಿಸದೆ ।
ತಿಳಿಯುವ ಮಾತಲ್ಲಾ ॥ ಪ ॥

ತಿಳಿಸದೆ ತಿಳಿಯದು
ತಿಳಿಯದೆ ಹೊಳೆಯದು ।
ಹೊಳೆಯದೆ ಇಳಿಯದು ।
ಇಳಿಯದೆ ಉಳಿಯದು ॥ ಅ ॥

ಭೇದವಳಿಯಬೇಕು । ಮನದವಿ– ।
ವಾದ ಕಳೆಯಬೇಕು ।
ಸಾಧುಸಂತರ ಸಂಗ ।
ಸಾಧಿಸಿ ತತ್ವದ ।
ಹಾದಿಯ ತಾವು
ವೋದದಿ ಪಿಡಿಯದೆ ॥ ೧ ॥

ಸಾಧಿಸುವದು ಯುಕ್ತಿ । ನಿಜಾನಂದ ।
ಭೋಧದೊಳಗೆ ಮುಕ್ತಿ ।
ಆದಿ ಮೂರುತಿ **ಭವ**–
**ತಾರಕ** ದೇವನ ।
ಪಾದ ಪೂಜಿಸಿ ಸ–
ದ್ಗುರುವಿನ ಭಜಿಸದೆ ॥ ೨ ॥

—ಭವತಾರಕ

—೦—

— ೩೬ —

## ಚಿಂತೆಯು ತೊರೆಯಿರಿ

(ರಾಗ—ಪಂತುವರಾಳಿ ರೂಪಕತಾಳ)

ಚಿಂತೆಯಾತಕೊ । ಬಯಲಭ್ರಾಂತಿಯಾತಕೊ ॥
ಕಂತು ಪಿತನ ದಿವ್ಯನಾಮ । ಮಂತ್ರವನ್ನು ಜಪಿಸುವರಿಗೆ ॥ ಪ ॥

ಒಳ್ಳೆ ಉದಯಕಾಲದಲ್ಲಿ ।
ವೇಳೆಯರಿತು ಕೂಗುತಿರುವ ॥
ಕೋಳಿ ತನ್ನ ಮರಿಗೆ ಮೊಲೆಯ ।
ಹಾಲಕೊಟ್ಟು ಸಲಹುತಿಹುದೆ ? । ೧ ॥

ಸಡಗರದಲಿ ನಾರಿಯರು ।
ಹಡೆಯೆ ಬೇಕು ಸೂಲಗಿತ್ತಿ ॥
ಅಡವಿಯೊಳಗೆ ಹೆರುವ ಮೃಗವ ।
ಹಡೆಯಿಸಿ ರಕ್ಷಿಪರು ಯಾರು ? ॥ ೨ ॥

ಹೆತ್ತ ತಾಯಿ ಸತ್ತು ಹೋಗೆ ।
ನತ್ತೆವೆಂಬರಿಲ್ಲ ಜನರು ॥
ಮೃತ್ಯು ಬಂದು ಹತ್ತಿರಿರಲು ।
ಹೆತ್ತವರೇನುಳಿಸುತಿಹರೆ ? ॥ ೩ ॥

ಗಟ್ಟಿ ಮಣ್ಣಬೊಂಬೆಮಾಡಿ ।
ಹೊಟ್ಟೆಯೊಳಗೆ ಇರಿಸಲಿಲ್ಲ ॥
ಕೊಟ್ಟದೇವ ಕೊಂಡು ಹೋಗಲು ।
ಕುಟ್ಟಿಕೊಂಡು ಅಳುವುದೇಕೆ ! ॥ ೪ ॥

ಇರವಿನಲ್ಲಿ ಸೌಖ್ಯವುಂಟು ।
ಪರದಲ್ಲಿಯು ಪದವಿಯುಂಟು ॥
ಗುರು **ಪುರಂದರ ವಿಠಲನಾ** ।
ಸ್ಮರಣೆಯನ್ನು ಮರೆಯದವಗೆ ॥ ೫ ॥

—ಪುರಂದರದಾಸ

—೩೭—

## ಶಾಂತಿಯು ತಪ

( ರಾಗ—ಕಲ್ಯಾಣಿ; ಅಟತಾಳ )

ಶಾಂತಿ ತಪವ ಮಾಡಿರೋ । ಬ್ರಹ್ಮಾನಂದ ॥ ಪ ॥
ಶಾಂತಿ ಆತ್ಮಜ್ಞಾನ, ಶಾಂತಿ ಮುಕ್ತಿಸ್ಥಾನ ।
ಶಾಂತನಾಗದೆಯಿರಲ್ಯಾತರ ಜ್ಞಾನ ? ॥ ಅ ॥

ಅಮಿತ ತಾಮಸ–ರಾಜಸ । ಗುಣಗಳಿಗೆಲ್ಲ ।
ವಿಮುಖಮಾನಸನಾಗುತ ।
ಅಮಲ ಸಾತ್ವಿಕಬುದ್ಧಿಯಿಂದಾತ್ಮನನು ಕಂಡ ।
ಕ್ಷಮೆಯೆ ರೂಪವು ತಪಸ್ವಿಗೆಯೆನ್ನಲಾಗಿ ॥ ೧ ॥

ಶಾಂತಿಯಿಲ್ಲದೆಯಿರಲು । ಜ್ಞಾನಿಗೆ ಬ್ರಹ್ಮ- ।
ಕಾಂತಿಯು ಶೋಭಿಸದು ।
ಶಾಂತಿಯೆ ಸುರಭಿ ಚಿಂತಾಮಣಿಯೆನಿಪುದು ।
ಶಾಂತಿಯೆ ಶಿವತತ್ವವೆನಿಸಿಕೊಳ್ಳುವುದಾಗಿ ॥ ೨ ॥

ಅಂತರಂಗದಿ ತಲೆಯಾ । ತೋರುವ ದುಷ್ಟ ।
ಸಂತತಿ ನೆರೆಹೊರೆಯಾ ।
ಶಾಂತಿ ಎಂಬುವ ಖಡ್ಗದಿಂದಲಿ ಶೀಳಿ ನಿ- ।
ರಂತರ **ಗುರುಮಹಾಲಿಂಗ**ನಾಗಿರುವಂಥ ॥ ೩ ॥

—ಶಂಕರಾನಂದ

—೦—

—೩೮—

## ಅನುಭವದ ಅಡಿಗೆ

( ರಾಗ—ನಾದನಾಮಕ್ರಿಯೆ—ಛಾಪು ತಾಳ )

ಅನುಭವದಡಿಗೆಯ ಮಾಡಿ, ಅದ-
ಕ್ಕನುಭವಿಗಳು ಬಂದು ನೀವೆಲ್ಲಕೂಡಿ ॥ ಪ ॥

ತನುವೆಂಬ ಭಾಂಡವ ತೊಳೆದು, ಕೆಟ್ಟ
ಮನಸದ ಚಂಚಲವೆಂಬ ಮುಸುರೆಯ ಕಳೆದು ।
ಘನವಾಗಿ ಮನೆಯನ್ನು ಬಳಿದು, ಅಲ್ಲಿ
ಮಿನುಗುವ ತ್ರಿಗುಣದ ಒಲೆಗುಂಡು ನೆಡೆದು ॥ ೧ ॥

ವಿರಕ್ತಿಯೆಂಬುವ ಮಡಿಯುಟ್ಟು, ಪೂರ್ಣ
ಹರಿಭಕ್ತಿಯೆಂಬ ನೀರನ್ನೆಸರಿಟ್ಟು ।
ಅರಿವೆಂಬ ಬೆಂಕಿಯ ಕೊಟ್ಟು, ಮಾಯಾ
ಮರವೆಂಬ ಕಾಷ್ಟವ ಮುದದಿಂದ ಸುಟ್ಟು ॥ ೨ ॥

ಕರುಣೆಂಬೊ ಸಾಮಗ್ರಿ ಹೂಡಿ, ಮೋಕ್ಷ
ಪರಿಕರವಾದಂಥ ಪಾಕವ ಮಾಡಿ ।
ಗುರುಶರಣರು ಸವಿದಾಡಿ, ನಮ್ಮ
**ಪುರಂದರ ವಿಠಲನ** ಬಿಡದೆ ಕೊಂಡಾಡಿ ॥ ೩ ॥

—ಪುರಂದರದಾಸ

—o—

— ೩೯ —

## ಆತ್ಮೋದ್ಧಾರಕ್ಕೆ ಭಗವಂತನ ನಾಮವೊಂದೇ ಸಾಲದೆ ?

(ರಾಗ—ಮೋಹನ ಅಟತಾಳ)

ಸ್ಮರಣಿಯೊಂದೇ ಸಾಲದೆ । ಗೋವಿಂದನ ।
ನಾಮವೊಂದೇ ಸಾಲದೆ ॥ ಪ ॥

ಪರಮ ಪುರುಷನನ್ನು ನೆರೆನಂಬಿದವರಿಗೆ ।
ದುರಿತದ ಬಾಧೆಯಗುರುತು ತೋರುವುದೆ ? ॥ ಅ ॥

ಕಡುಮೂರ್ಖನಾದರೇನು ? ದುಷ್ಕರ್ಮದಿ ।
ತೊಡೆದಾತನಾದರೇನು ? ॥
ಜಡನಾದರೇನಲ್ಪ ಜಾತಿಯಾದರೇನು.? ।
ಬಿಡದೆ ಪ್ರಹ್ಲಾದನ ಸಲುಹಿದ ಹರಿಯ ॥ ೧ ॥

ಪಾತಕಿಯಾದರೇನು ? ಸರ್ವ–ಪ್ರಾಣ ।
ಘಾತಕೀ ಯಾದರೇನು ? ॥
ನೀತಿಯ ಬಿಡುತೆ ದುಷ್ಕರ್ಮಿಯಾದರೇನು ? ।
ಆತುರದಿ ಅಜಮಿಳನ ಸಲುಹಿದ ಹರಿಯ ॥ ೨ ॥

ಸಕಲ ತೀರ್ಥಯಾತ್ರೆಯು । ಮಾಡಿದಂಥ ।
ನಿಖಿಲ ಪುಣ್ಯದ ಫಲವು ॥
ಭಕುತಿ ಪೂರ್ವಕವಾಗಿ ಬಿಡದನುದಿನಲ್ಲಿ ।
ಪ್ರಕಟ **ಪುರಂದರ ವಿಠಲನ** ನಾಮದ ॥ ೩ ॥

—ಪುರಂದರದಾಸ

—o—

— ೪೦ —

## ಹಗಲಿರುಳು ನಾಮಾಮೃತವ ನೀಡು

(ರಾಗ—ಆನಂದಭೈರವಿ ಅಟತಾಳ)

ನಾರಾಯಣ ನಿಮ್ಮ ನಾಮದ ಸ್ಮರಣೆಯು
ಸಾರಾಮೃತ ಎನ್ನ ನಾಲಗೆಗೆ ಬರಲಿ ॥ ಪ ॥

ಕೂಡುವಾಗಲಿ ನಿಂತಾಡುವಾಗಲಿ ಮತ್ತೆ
ಹಾಡುವಾಗಲಿ ಹರಿದಾಡುವಾಗಲಿ ।
ಖೋಡಿ ವಿನೋದದಿ ನೋಡದೆನಾ ಬಲು
ಮಾಡಿದ ಪಾಪ ಬಿಟ್ಹೋಡಿ ಹೋಗೋಹಾಂಗೆ ॥ ೧ ॥

ಜ್ವರ ಬಂದಾಗಲಿ ಛಳಿ ಬಂದಾಗಲಿ
ಮರಳಿ ಮರಳಿ ಮತ್ತೆ ನಡುಗುವಾಗಲಿ ।
ಹರಿನಾರಾಯಣ ದುರಿತನಿವಾರಣೆಂದು
ಇರುಳು ಹಗಲು ನಿಮ್ಮ ಸ್ಮರಣ ಮರೆಯಧಾಂಗೆ ॥ ೨ ॥

ಸಂತತ ಹರಿ ನಿಮ್ಮ ಸಾವಿರ ನಾಮವು
ಅಂತರಂಗದ ಒಳಗಿರಿಸಿಯಿರಿಸಿ ।
ಎಂತೋ **ಪುರಂದರ ವಿಠಲ**ರಾಯನೇ
ಅಂತ್ಯಕಾಲದಲ್ಲಿ ಚಿಂತಿಸೋಹಾಂಗೆ ॥ ೩ ॥

—ಪುರಂದರದಾಸ

—o—

—೪೧—

## ಅಂತರಂಗದಲಿ ಬಿಂಬಧ್ಯಾನ

(ರಾಗ—ಕಾಂಬೋಧಿ ಝಂಪೆ ತಾಳ)

ಧ್ಯಾನವನು ಮಾಡು ನೀ ಬಿಂಬಮೂರುತಿಯ ॥ ಪ ॥
ಆನಂದದಲಿ ಕುಳಿತು ಅಂತರಂಗದಲಿ ॥ ಅ ॥

ಸದಾಚಾರನಾಗಿ ದ್ವಾದಶ ಗುರುಗಳಿಗೆರಗಿ
ಮುದದಿಂದ ಮೂಲಮಂತ್ರವನು ಜಪಿಸಿ ।
ಸದಮಲ ಭಕ್ತಿಯಲಿ ದೇಹಸ್ಥಿತಿಯನೆ ತಿಳಿದು
ಪದುಮಾಸನವ ಹಾಕಿ ಪರಮ ವಿಶ್ವಾಸದಲಿ ॥ ೧ ॥

ಅಂಗವನು ಚಲಿಸದೆ ಚನ್ನಾಗಿ ದೃಢವಾಗಿ
ಕಂಗಳನೆ ಮುಚ್ಚಿ ಇಂದ್ರಿಯಗಳನೆ ತೆರೆದು ।
ಮಂಗಳ ಶೋಭಿತ ಅಖಂಡ ಧ್ಯಾನದಂತ
ರಂಗದೊಳಗೆ ನಿಲಿಸಿ ಎಲ್ಲವನು ಕಾಣೊ ॥ ೨ ॥

ಭಗವದ್ರೂಪಗಳೆಲ್ಲ ಒಂದು ಬಾರಿ ಸ್ಮರಿಸಿ
ಮಗುಳೆ ಪರಮ ಗುರುವಿನ ಮೂರ್ತಿಗೆ ।
ತೆಗೆದು ಆವ್ಹಾನಮಾಡಿ ಅಲ್ಲಿಂದ ಹರುಷದಿ
ಸ್ವಗುರು ಬಿಂಬಮೂರ್ತಿಯಲಿ ಐಕ್ಯವನೆಮಾಡು ॥ ೩ ॥

ಜ್ಞಾನಪ್ರಕಾಶದಲ್ಲಿ ಇದ್ದು ನಿನ್ನ ಹೃದಯ
ಸ್ಥಾನದಲಿ ಅಷ್ಟದಲ ಕಮಲ ಮಧ್ಯ
ಶ್ರೀನಿವಾಸನ ಮೂರ್ತಿ ನಿಲ್ಲಿಸಿ ಬಾಹ್ಯದಲಿ ।
ಏನೇನು ಪೂಜೆಯನು ಉಳ್ಳದನು ಮಾಡು ॥ ೪ ॥

ಸಚ್ಚಿದಾನಂದ ಆತ್ಮ ಉಪಾಸನವನೆ ಮಾಡು
ಕ್ಷಣಕ್ಷಣಕೆ ಹರಿಪಾದವನು ನೋಡುತ ।
ಅಣುರೇಣು ಚೇತನಾಚೇತನಕೆ ನೇಮಕ
ಫಣಿಶಯನನಲ್ಲದೆ ಮತ್ತೊಬ್ಬರಿಲ್ಲವೆಂದು ॥ ೫ ॥

ಮಮತೆಯನ್ನು ತೊರೆದು ಮೇಲೊಂದವೇಕ್ಷಿಸದೆ
ಸಮವಿಷಮ ತಿಳಿದೊಂದೆ ಭಕುತಿಯಲ್ಲಿ ।
ಸಮಾಧಿಯೊಳಗಾಗಿ ದಿವ್ಯದೃಷ್ಟಿಲಿ ಸರ್ವ-
ಕ್ರಮ ಅನುಕ್ರಮದಿಂದ ಭರಿತಭಾವುಕನಾಗೋ ॥ ೬ ॥

ಈ ಪರಿ ಧೇನಿಸಲು ದೇವ ಕರುಣವ ಮಾಡೆ
ಪಾಪಸಂಚಿತವು ಪ್ರಾರಬ್ಧನಾಶ ।
ಅಪರೋಕ್ಷಿತನಾಗಿ ತನ್ನ ಯೋಗ್ಯತದಷ್ಟು
**ಗೋಪಾಲ ವಿಜಯವಿಠಲ**ನೊಲಿವನಾಗಿ ॥ ೭ ॥

—ವಿಜಯದಾಸ

— ೦ —

— ೪೨ —

## ಒಳಗಣ್ಣಿನಿಂದ ಹರಿಯ ನೋಡು

(ರಾಗ—ನಾದನಾಮಕ್ರಿಯ ಅಟತಾಳ)

ಕಣ್ಣಿನೊಳಗೆ ನೋಡೊ ಹರಿಯ । ಒಳ ।
ಗಣ್ಣಿನಿಂದಲಿ ನೋಡು ಮೂಜಗದಧೊರೆಯ ॥ ಪ ॥

ಆಧಾರ ಮೊದಲಾದ ಆರು । ಚಕ್ರ ।
ಶೋಧಿಸಿ ಬಿಡಬೇಕು ಈಕ್ಷಣ ಮೂರು ॥
ಸಾಧಿಸಿ ಸುಷಮ್ನ ಏರು । ಅಲ್ಲಿ ।
ಭೇದಿಸಿ ನೀ ಪರಬ್ರಹ್ಮನ ಸೇರು ॥ ೧ ॥

ಎವೆ ಹಾಕದೆ ಮೇಲೆ ನೋಡು । ಮುಂದೆ ।
ತವಕದಿಂದಲಿ ವಾಯುಬಂಧನ ಮಾಡು ॥
ಸವಿದು ನಾದವ ಪಾನಮಾಡು । ಅಲ್ಲಿ ।
ನವವಿಧ ಭಕ್ತಿಲಿ ನಲಿನಲಿದಾಡು ॥ ೨ ॥

ಅಂಡದೊಳಗೆ ಆಡುತಾನೆ । ಭಾನು ।
ಮಂಡಲ ನಾರಾಯಣ ನೆಂಬುವನೆ ॥
ಕುಂಡಲಿ ತುದಿಯೊಳಿದ್ದಾನೆ । ನಮ್ಮ ।
**ಪುರಂದರ ವಿಠಲನು** ಪಾಲಿಸುತಾನೆ ॥ ೩ ॥

—ಪುರಂದರದಾಸ

—೦—

—೪೩—

## ಅರಿತ ಹರಿಪೂಜೆ

( ರಾಗ—ಕಾಂಬೋಧಿ —ಝಂಪೆ ತಾಳ )

ಅರಿತವರಿಗತಿ ಸುಲಭ ಹರಿಪೂಜೆಯು
ಅರಿಯದವ ನಿರ್ಭಾಗ್ಯತರ ಲೋಕದೊಳು ॥ ಪ ॥

ಹೈಮಾಂತ ಮಂಟಪವು, ಭೂಮಂಡಲವೆ ಪೀಠ
ಸೋಮ ಸೂರ್ಯರೆ ದೀಪ, ಭುರುಹಗಳು
ಚಾಮರಗಳತಿವಿಮಲ ವ್ಯೋಮಮಂಡಲ ಛತ್ರ
ಯಾಮಾಷ್ಟಕಗಳಷ್ಟದಳದ ಪದ್ಮವು ಎಂದು ॥ ೧ ॥

ಮಳಗು ಮಜ್ಜನವು, ದಿಗ್ವಲಯಂಗಳೇ ವಸನ
ಮಲಯಾನಿಲವೆ ಶ್ರೀಗಂಧ ಧೂಪ,
ಇಳೆಯೊಳಗೆ ಬೆಳೆದ ಧಾನ್ಯಗಳೆಲ್ಲ ನೈವೇದ್ಯ
ಥಳಥಳಿಪ ಮಿಂಚು ಕರ್ಪೂರದಾರತಿಯೆಂದು ॥ ೨ ॥

ಶಾತಕುಂಭೋದರಾಂಡಂತಸ್ಥರೂಪ ಸಂ
ಪ್ರೀತಿಯಿಂದಲಿ ಯಜಿಸಿ ಮೋದಿಸುವರ
ವೀತಶೋಕರಮಾಡಿ ಸಂತೈಸುತಿಹ **ಜಗ**
**ನಾಥ** ವಿಠ್ಠಲ ಒಲಿದು ಸರ್ವಕಾಲಗಳಲ್ಲಿ ॥ ೩ ॥

—ಜಗನ್ನಾಥದಾಸ

— ೦ —

## ( ಅ ) ಪದ್ಯಗಳು:—

### [ ೨೨ ]

### ಧ್ಯಾನದ ಬಗೆ

ಚಿತ್ತವೆಂಬುದು ಗಾಳಿಯಂತೆ ಚಂಚಲವದು ।
ಸುತ್ತುತಿಹುದು ಕಂಡಕಡೆಗೆ ॥
ಒತ್ತಿ ತತ್ವಗಳಲ್ಲಿ ತಿರುಗಿಸಿ ತಂದದ ।
ಮತ್ತೆ ತನ್ನೊಳಗಿಡಬೇಕು ॥ ೧ ॥

ಹರಿಯ ಬಿಟ್ಟರೆ ಹರಿವುದು ಬೇಡವೆಂದರೆ ।
ಹರಿಯುದು ಮನಕದು ಸಹಜಾ ॥
ಹರಿವ ಚಿತ್ತವ ತತ್ವದೊಳು ತೊಳಲಿಸಿ ತಂದು ।
ಸ್ಥಿರಮಾಡಬೇಕು ತನ್ನೊಳಗೆ ॥ ೨ ॥

ಮನದ ವಿಕಲ್ಪವಿಂದ್ರಿಯದ ಕಷಾಯವ ।
ಜನಿಯಿಪುದೊಡನೆ ಮಾಸುವುದು ॥
ತನುವಲುಗುವುದು ಬಂಧಾಸ್ರವವಹುವಾಗಿ ।
ಮನ ತಾನೆ ಮನ ಕರ್ಮಗಳಿಗೆ ॥ ೩ ॥

ಮನವಾತ್ಮನೊಳು ನಿಲ್ಲದೊಂದ್ಹೊಂದು ವಸ್ತುವ ।
ನೆನೆಯೆ ನೂತನ ಕರ್ಮವಹುದು ॥
ಮನವಾತ್ಮನೊಳು ನಿಂದರಾಗಳೆ ಕರ್ಮ ಜು- ।
ಮ್ಮನೆ ಜಾರುವುದು ತನ್ನ ತಾನೆ ॥ ೪ ॥

ಧ್ಯಾನದಿಂದಲ್ಲದೆ ಕರ್ಮನಿರ್ಜರಿಸದಾ ।
ಧ್ಯಾನ ತಾನೆಂತುಂಟೆಂದೆನಲು ॥
ನಾನಾ ಚಿಂತೆಯಳಿದು ಮನವಾತ್ಮ ಸಂ ।
ಧಾನದೊಳಿರಲದೆ ಧ್ಯಾನಾ ॥ ೫ ॥

ನುಡಿ ನಡೆ ನೋಟ ಮೈಯಾಟವಳಿದು ಲೆಪ್ಪ ।
ದೊಡಲ ಪುತ್ತಳಿಯಂತೆ ಕುಳಿತು ॥
ಮಿಡುವ ಮನವನಾತ್ಮನೊಳಗಡಗಿಸಲದು ।
ನುಡಿವರೆಲ್ಲರು ಧ್ಯಾನವೆಂದು ॥ ೬ ॥

ಕಲಿತು ಮರೆದುದೊಂದು ಪದ್ಯವ ನೆನೆದುದ ।
ನೊಳಗೊಳಗಾಲೋಚಿಪಂತೆ ॥
ತಿಳಿವು ಬೆಳಗು ನನ್ನ ರೂಪೆಂದು ನೆನೆಹು ಮೈ ।
ಯೊಳಗಾಡಲಾತ್ಮ ತೋರುವುದು ॥ ೭ ॥

ಕಣ್ಮುಚ್ಚಿ ನೋಡಿದರೊಳಗಾತ್ಮ ನಸುಕಾಂತಿ ।
ಪೊಣ್ಮಿ ತೋರುತ ಶೂನ್ಯವಡುತ ॥
ಜಾಣ್ಮೆದೋರುತ ನಸುಸುಖದೋರುತಿರಲದು ।
ನುಣ್ಮಾತಿನೊಳು ಧರ್ಮವಹುದು ॥ ೮ ॥

—ರತ್ನಾಕರ

—೦—

## [ ೨೩ ]

## ಚಿನ್ಮಯನ ಧ್ಯಾನವು ಕಲ್ಪತರುವು

ಧರ್ಮವೆ ನಿರ್ಮಲ ಸುವರ್ಧೇನು
ಧರ್ಮವೆ ಮೂಜಗಕೆಲ್ಲ ।
ಧರ್ಮವೆ ಕಲ್ಪಮಹೀಮಹವು
ಧರ್ಮವೆ ಪರುಷನ ಮೂರ್ತಿ ॥ ೧ ॥

ತನುವನು ಭೇದಿಸಿ ತನ್ನೊಳಗೆ
ವಿನುತಸಮಾಧಿಯೊಳಿರ್ದು ।
ಅನಘನ ಪರಮನ ನೋಡಿದರೆ
ನೆನೆವುದು ಪಂಡಿತನೆಂದು ॥ ೨ ॥

ಪಡೆಯದ ಚಿನ್ಮಯ ಭಾವನೆಯ
ಪಡೆದು ತನ್ನೊಳು ನಿಲಲಾಗ ।
ಕಡೆದರೆ ದಧಿಯನು ಕೈಕೆಳಗೆ
ಪೆಡಸಗುದಂತನೆ ಯೋಗಿ ॥ ೩ ॥

ಗರುಡನ ಧ್ಯಾನದೊಳಹಿ ವಿಷವು
ಪರಿಹರಿಸುವದೆಂತಂತೆ ।
ಪರಮನ ಧ್ಯಾನದೊಳಘವಿಷವು
ಪರಿವುದು ತತ್‌ಕ್ಷಣದಲ್ಲಿ ॥ ೪ ॥

ಮೌನ ತಪೋಗುಣಶೀಲಗಳು
ಧ್ಯಾನದೊಳಡವಿಹವೆಲ್ಲ ।
ಜ್ಞಾನಿಗೆ ಜನನಸ್ಥಾನವಿದು
ಧ್ಯಾನಕೆ ವಂದಿಪೆನೊಮ್ಮೆ ॥ ೫ ॥

ನೂತನ ಮಂತ್ರದ ಧ್ಯಾನದೊಳು
ಭೂತಗಳೋಡುವವಂತೆ ।
ಜ್ಯೋತಿರೂಪದ ಭಾವನೆಯಿಂ
ಮತ್ತಿನ್ನಳಿವುದು ಕರ್ಮ ॥ ೬ ॥

ಅರಿಯದೆ ಮನದೊಂದರ್ಥವನು
ಅರಸಿಯು ಧ್ಯಾನಿಸುವಂತೆ ।
ಅರಸಲು ತನ್ನನು ತನ್ನೊಳಗೆ
ನೆರೆ ಸುಖಮೊಂದಿಹುದೊಂದೆ ॥ ೭ ॥

ಜನಿಸಿದ ರಾಗಾದಿಕ ಮೆಂಬೀ
ಘನ ಕಲ್ಲೋಲಗಳಿಂದ ।
ಮನವೆಂಬುದಕವು ಕದಡದಿರೆ
ಚಿನುಮಯನಲ್ಲಿಯೆ ತೋರ್ಕುಂ ॥ ೮ ॥

—ಕಲ್ಯಾಣಕೀರ್ತಿ

[ ೨೪ ]

## ಕಡು ಸಂಕಟದಲ್ಲಿಯೂ ಧ್ಯಾನವ ಬಿಡದಿರು

ನಡುಮಾರ್ಗದೊಳಗೋರ್ವ ನಡೆನಡೆದು ಪೋಗುತಿರೆ
ಬಿಡದೆ ಹೆಬ್ಬುಲಿ ಕಂಡು ಸಿಡಿಲುಮೊಗ್ಗರದಂತೆ
ಘುಡಘುಡಿಸುತಡಿಗಡಿಗೆ ಆರ್ಭಟಿಸಿ ಮೊರೆಯುತಲಿ ಅಡ
ವಿಯಲಿ ಲಂಘಿಸುತಲಿ ।
ಕಡುಭಯಂಕರದಿಂದ ನಡೆತರಲು ಭಯದೊಳಗೆ
ಮೃಡನಿಮ್ಮ ನಾಮವನು ಬಿಡದೆ ಕೀರ್ತಿಸುತಿರಲು
ದೃಢಭಕ್ತನವನಹನು ನಿಜಲಿಂಗ ಭವಭಂಗ ಶರಣಜನ
ಭಕ್ತ ಸಂಗಾ ॥ ೧ ॥

ಪೊಡೆವೊಡೆಯ ತೃಣಬೆಳೆದ ಕಾಂತಾರದೊಳಗೊರ್ವ
ನೊಡಗೊಡಗಿ ನಡೆತರುವ ಸಮಯದೊಳಾತೃಣವೆ
ಬೆದಬೆದನೆ ಕಿಚ್ಚಡರಿ ಸುಡುಸುಡುತ ಪೇರುರಿಯು ಗದಗದಿಸಿ
ನಾಲ್ದೆಸೆಯೊಳು ।
ಪದುಪದುಳದಿಂ ಮುಸುಕಿಕೊಂಡು ಬರುತಿರಲದಕೆ
ಹೆದರದಾತ್ಮದಲಿ ನಿಮ್ಮ ಧ್ಯಾನವ ಮಾಳ್ಪ
ನದುಭಕ್ತನವನಹುನು **ನಿಜಲಿಂಗ** ಭವಭಂಗ ಶರಣಜನ
ಭಕ್ತ ಸಂಗಾ ॥ ೨ ॥

—ನಿಜಲಿಂಗ

—೦—

[ ೨೫ ]

## ಸದ್ದೈವ ದೇವನನ್ನು ನೆನೆಯಿರಿ

ಆಸನವು ದೃಢವಾಗಿ ನಾಸಿಕಾಗ್ರದಿ ದಿಟ್ಟಿ
ಸೂಸುವ ಮನವ ಘನದಲಿರಿಸಿದನು ಜಗ- ।
ಧೀಶನಾಗಕ್ಕು ! ಸರ್ವಜ್ಞ ॥ ೧ ॥

ಭಕ್ತಿಗೆರಡಕ್ಕರವು ಮುಕ್ತಿಗೆರಡಕ್ಕರವು ।
ಭಕ್ತಿಯಿಂ ಮುಕ್ತಿ ಪಡೆದರೆ ಬಿಡದೆ ಆ- ।
ರಕ್ಕರವ ಹೇಳೊ ! ಸರ್ವಜ್ಞ ॥ ೨ ॥

ಎಂಜಲವು ಶವುಶವು ಸಂಜೆಯೆಂದೆನ ಬೇಡ ।
ಕುಂಜರವು ವನವನೆನೆವಂತೆ ಬಿಡದೆ ನಿ- ।
ರಂಜನನ ನೆನೆಯೊ ! ಸರ್ವಜ್ಞ ॥ ೩ ॥

ಸುಧಿಯು ಸುಧೆಯನು ಸವಿದು ಮುದದಿ ಮಂತ್ರವ ನೆನೆದು ।
ಉದಯರಾಗದೊಳಃ ನಿಂದಿರ್ದ ಶಿವಯೋಗಿ ।
ನಿಧಿ ಪುರುಷಕಾಣೊ ! ಸರ್ವಜ್ಞ ॥ ೪ ॥

ಕೋಳಿ ಕೂಗದ ಮುನ್ನ ಏಳುವದು ನಿತ್ಯ ದ- ।
ಯಾಳು ದೇವನು ಭಕ್ತಿಯಿಂ ನೆನೆವರೆ ।
ಆಳಿನಾಳಯ್ಯ ! ಸರ್ವಜ್ಞ ॥ ೫ ॥

—ಸರ್ವಜ್ಞ

## ( ಇ )   ವಚನಗಳು:—

### ( ೫೩ )

### ಒಲಿದು ಒಲಿಸಿಕೊಳು

ಒಲಿದು ಒಲಿಸಿಕೊಳ್ಳಬೇಕು
ಒಲಿದಲ್ಲದೆ ಇಲ್ಲ
ಹಲವು ಕೊಂಬೆಗೆ ಹಾರದಿರು ಮರುಳೇ !
ಅಟ್ಟಿನೋಡುವ, ಮುಟ್ಟಿನೋಡುವ,
ತಟ್ಟಿನೋಡುವ, ಒತ್ತಿನೋಡುವ,
ಅಟ್ಟಿದಡೆ, ಮುಟ್ಟಿದಡೆ, ತಟ್ಟಿದಡೆ, ಒತ್ತಿದಡೆ,
ನಿಷ್ಠೆಯ ಬಿಡದಿರ್ದಡೆ ತನ್ನನೀವ **ಮಹಾಲಿಂಗ ಕಲ್ಲೇಶ್ವರನು**

### ( ೫೪ )

### ನಿಷ್ಠೆಯ ಪರೀಕ್ಷೆ

ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ,
ಸಲೆ ಮಾರುವೋದೆನೆಂದರೆ,
ತನುವನಲ್ಲಾಡಿಸಿ ನೋಡುವೆ ನೀನು,
ಮನವನಲ್ಲಾಡಿಸಿ ನೋಡುವೆ ನೀನು,
ಧ್ಯಾನವನಲ್ಲಾಡಿಸಿ ನೋಡುವೆ ನೀನು
ಇವಕ್ಕೆಲ್ಲ ಅಂಜದಿರ್ದಡೆ,
ಭಕ್ತಿಕಂಪಿತ ನಮ್ಮ **ಕೂಡಲಸಂಗಮದೇವ**

### ( ೫೫ )

### ಭಕ್ತಿಯ ಹೊನ್ನಿಗೆ ಸಂಕಟದ ಪುಟ

ಇರಿಸಿಕೊಂಡು ಭಕ್ತರಾದರೆಮ್ಮವರು
ತರಿಸಿಕೊಂಡು ಭಕ್ತರಾದರೆಮ್ಮವರು

ಜರಿಸಿಕೊಂಡು ಭಕ್ತರಾದರೆಮ್ಮವರು
ಕೊರಿಸಿಕೊಂಡು ಭಕ್ತರಾದರೆಮ್ಮವರು
**ಕೂಡಲಸಂಗನ** ಶರಣರಿಗೆ ಮುನಿಸತಾಳಿ
ಎನ್ನ ಭಕ್ತಿ ಅರೆಯಾಯಿತ್ತು

( ೫೬ )

## ಕೊಂದರೂ ಭಕ್ತಿಯ ಬಿಡೆನು

ಚಂದನವ ಕಡಿದು, ಕೊರೆದು, ತೇದೊಡೆ,
ನೊಂದೆನೆಂದು ಕಂಪ ಬಿಟ್ಟಿತ್ತೇ ?
ತಂದು ಸುವರ್ಣವ ಕಡಿದೊರೆದಪಡೆ,
ಬೆಂದು ಕಳಂಕ ಹಿಡಿದಿತ್ತೇ ?
ಸಂದು ಸಂದು ಕಡಿದು ಕಬ್ಬನುತಂದು
ಬೆಂದು ಪಾಕಾಗುಳ್ಳ ಸಕ್ಕರೆಯಾಗಿ
ನೊಂದೆನೆಂದು ಸವಿಯ ಬಿಟ್ಟಿತ್ತೇ ?
ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು
ಮುಂದಿಳುಹಲು ನಮಗೆ ಹಾನಿಯೇ ?
ಎನ್ನ ತಂದೆ **ಚೆನ್ನಮಲ್ಲಿಕಾರ್ಜುನ ದೇವಯ್ಯ !**
ಕೊಂದಡೆ ಶರಣೆಂಬುದ ಮಾಣೆನು

( ೫೭ )

## ಛಲದ ಬಲ

ಛಲವಿರಬೇಕು ಭಕ್ತಿಯ ಮಾಡುವಲ್ಲಿ.
ಹಿಡಿದು ಬಿಡಿನೆಂಬ ಛಲವಿರಬೇಕು ನಿತ್ಯನೇಮದಲ್ಲಿ.
ಹಿಡಿದು ಬಿಡೆನೆಂಬ ಛಲವಿರಬೇಕು,
ನಮ್ಮ **ಅಖಂಡೇಶ್ವರ** ಲಿಂಗವ ಕೂಡಿ,
ಅಗಲಬಾರದೆಂಬ ನಿಷ್ಠೆಯಲ್ಲಿ.

( ೫೮ )

## ಕಲಿಯುಗದಲ್ಲಿ ನಾಮಸ್ಮರಣೆಯೆ ಮೇಲು ಸಾಧನ

ಮನ ಚಂಚಲದಿ ತಪವ ಮಾಡಲು ಅಶಕ್ಯವು.
ಘನ ಅಜ್ಞಾನದಿ ಕೆಲವು ಕರ್ಮವು ಹತ್ತವು.
ಧನಶುದ್ಧಿಯಿಲ್ಲದ ದಾನ ವೃಥಾ.
ಇವು ಇನಿತಾದ್ದರಿಂದ **ಪುರಂದರ ವಿಠಲ,**
ಈ ಯುಗದಿ ನಾಮಸ್ಮರಣೆ ಲೇಸೆಂದನು.

( ೫೯ )

## ನಾಮವು ಕಲ್ಪತರು

ನರವೃಂದಯೆಂಬುವ ಕಾನನದಲ್ಲಿ,
ಶ್ರೀ ಹರಿನಾಮವೆಂಬಂಥಾ ಕಲ್ಪವೃಕ್ಷ ಹುಟ್ಟಿತಯ್ಯಾ.
ನೆರಳು ಸೇರಲುಂಟು, ಫಲವು ಮೆಲ್ಲಲುಂಟು.
ಒರೆವ ನಾಲಿಗೆ ರುಚಿಗೆ ನಾಮಮಂತ್ರಗಳುಂಟು.
ಇದೇ ಮುನಿಜನರ ಮನದ ಕೊನೆಯ ರಾವೊ.
ಇದೇ ಬ್ರಹ್ಮಾದಿಗಳ ಸದಮಲ ಹೃದಯ ಪೀಠ.
ಇದೇ ದ್ವಾರಾವತಿ ! ಇದೇ ಕ್ಷೀರಾಂಬುಧಿ !
ಇದೇ **ಪುರಂದರ ವಿಠಲನ** ವೈಕುಂಠ ಮಂದಿರ !

( ೬೦ )

## ನಾಮ ಮಹಿಮೆ

ನಾಮವೇ ಸರ್ವಪವಿತ್ರ ಮಾಡುವುದು.
ನಾಮವೇ ಘನದುರಿತ ಸಂಹಾರಮಾಡುವುದು.
ನಾಮವೇ ನೆನೆವಂಗೆ ವಜ್ರಾಂಗಿಯಿಪ್ಪುದು.
ನಾಮವೇ ಸಕಲ ಭಕ್ತಸ್ತೋಮವ ಪಾಲಿಸಿತು.
ನಾಮವೇ ನಿಂದಲ್ಲಿ ಕುಳಿತಲ್ಲಿ ಮಹಾಭಾಗ್ಯ.
ನಾಮವೊಂದು ನೆನೆಯೆ **ವಿಜಯ ವಿಠಲನ**
ಧಾಮವೆ ಆಗುವದು ನಡೆಯದೆ ನಮಗೆಲ್ಲ.

( ೬೭ )

## ನಿಷ್ಕಾಮ ಭಕ್ತಿ

ಮಾಡಿದೆನೆಂಬುದು ಮನದಲ್ಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ.
ಮಾಡಿದೆನೆನದಿರಾ ಲಿಂಗಕ್ಕೆ !
ಮಾಡಿದೆನೆನ್ನದಿರಾ ಜಂಗಮಕ್ಕೆ !
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ
ಬೇಡಿದ್ದನೀವನು **ಕೂಡಲ ಸಂಗಮ ದೇವಾ**

( ೬೮ )

## ದೇವರ ಕೃಪೆಯ ಹಿರಿಮೆ

ನೀನೊಲಿದರೆ ಕೊರಡು ಕೊನರುವದಯ್ಯ.
ನೀನೊಲಿದರೆ ಬರಡು ಹಯನಹುದಯ್ಯ.
ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯ.
ನೀನೊಲಿದರೆ ಸಕಲ ಪದಾರ್ಥ ಇದಿರಲ್ಲಿಪ್ಪುವು
**ಕೂಡಲ ಸಂಗಮ ದೇವಾ**

---

( ೬೧ )

## ನಿಮ್ಮ ನೆನವು ಮರವಿನ ಕತ್ತಲೆಗೆ ಜ್ಯೋತಿ

ಕರಿ ಘನ ಅಂಕುಶ ಕಿರಿದೆನ್ನಬಹುದೆ ಅಯ್ಯ?
ಗಿರಿ ಘನ ವಜ್ರ ಕಿರಿದೆನ್ನಬಹುದೆ ಅಯ್ಯ?
ತಮಂಥ ಘನ ಜ್ಯೋತಿ ಕಿರಿದೆನ್ನಬಹುದೆ ಅಯ್ಯ?
ಮರಹು ಘನ, ನಿಮ್ಮ ನೆನಹು ಕಿರಿದೆನ್ನಬಹುದೆ ಅಯ್ಯ?
**ಕೂಡಲಸಂಗಮದೇವಾ**, ನಿಮ್ಮ ಕೃಪೆಯ ಘನ ನೀವೇ ಬಲ್ಲಿರಿ.

( ೬೨ )

## ನಿಮ್ಮ ನೆನಪು ಎನ್ನ ಪ್ರಾಣ

ಎನಗೆ ನಿಮ್ಮ ನೆನಪಾದಾಗಳೇ ಉದಯ.
ಎನಗೆ ನಿಮ್ಮ ಮರಹಾದಾಗಳೇ ಅಸ್ತಮಾನ.
ಎನಗೆ ನಿಮ್ಮ ನೆನಹವೇ ಜೀವಾಳ.
ಎನಗೆ ನಿಮ್ಮ ನೆನಹವೇ ಪ್ರಾಣ ಕಾಣಾ ಸ್ವಾಮಿ!
ಎನ್ನ ಹೃದಯವಲ್ಲಿ ನಿಮ್ಮ ಚರಣದ ಉಂಡಿಗೆಯನೊತ್ತಯ್ಯ.
ಎನ್ನ ವದನದಲ್ಲಿ ಷಡಕ್ಷರಿಯ ಬರೆಯಯ್ಯ
**ಕೂಡಲಸಂಗಮದೇವಾ.**

( ೬೩ )

## ನಾಮಾಮೃತವ ನೀಡು

ಎನೆ ಬಿರಿ ವನಕ, ಮನದಣಿ ವನಕ
ನಾಲಿಗೆ ನಲಿನಲಿದೋಲಾಡು ವನಕ
ನಿಮ್ಮ ನಾಮಾಮೃತವ ತಂದಿರಿಸು-
ಕಂಡಯ್ಯ! ಎನಗೆ, ಎನ್ನ ತಂದೆ!
ಬಿರಿ ಮುಗುಳಂತೆ ಎನ್ನ ಹೃದಯ
ನಿಮ್ಮ ಶ್ರೀಚರಣದ ಮೇಲೆ ಬಿದ್ದು ಅರಳುಗೆ
**ಕೂಡಲ ಸಂಗಮದೇವಾ**

( ೬೪ )

## ಜ್ಞಾನಲೋಚನದ ನೋಟ

ಅರಿದರೆದೆವೆ ದೃಷ್ಟಿಯ ನಾಸಾಗ್ರದಲ್ಲಿರಿಸಿ ನೋಡುತ್ತ,
ಹೃದಯ ಕಮಲದಲಿದ್ದ ಅಚಲಲಿಂಗದೊಳಗೆ
ಜ್ಞಾನಲೋಚನದಿಂ ನೋಡುತ್ತ,
ತನುಮನೇಂದ್ರಿಯ ತರಹರವಾಗಿ,
ಮನ ನಿವಾತ ಜ್ಯೋತಿಯಂತೆ ನಿಂತು,
ನಿಜವ ಕೂಡಬಲ್ಲಾತನೇ ನಿಜಗುರು
**ಸ್ವತಂತ್ರ ಸಿದ್ಧಲಿಂಗೇಶ್ವರನಲ್ಲಿ** ಸಹಜಯೋಗಿ.

( ೬೫ )

## ನೀವು ಎನ್ನಲ್ಲಿ ತುಂಬಿ ಇದ್ದ ಮೂಲಕ ನಾನು 'ತುಂಬಿ' ಯಾಗಿರುವೆ

ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ನಿಮ್ಮ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ,
ಕಿವಿಯಲ್ಲಿ ನಿಮ್ಮ ಕೀರ್ತಿಯು ತುಂಬಿ.
**ಕೂಡಲ ಸಂಗಮ ದೇವಾ** ನಿಮ್ಮ ಚರಣ ಕಮಲದೊಳು
ಸೊಗದ ಬಂಡನುಂಬ ತುಂಬಿಯಾಗಿರ್ದೆನು.

( ೬೬ )

## ಅಷ್ಟಸಾತ್ವಿಕಭಾವಗಳೇ ಭಕ್ತಿಯ ಕುರುಹು

ಮನ ಮನ ಕರಗದಿದ್ದಲ್ಲಿ ತನು ಕರಗದಿದ್ದರೆ,
ಸೊಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿರ್ದೊಡೆ,
ತಂಗಳಶ್ರು ಜಲಗಳು ಸುರಿಯದಿರ್ದೊಡೆ
ನುಡಿಯಲ್ಲಿ ಗದ್ಗದಂಗಳು ಹೊರಹೊಮ್ಮದಿರ್ದೊಡೆ,
**ಕೂಡಲ ಸಂಗಮ ದೇವರ** ಭಕ್ತಿಗಿದೇ ಚಿಹ್ನ,
ಎನ್ನಲ್ಲಿ ಇಲ್ಲವಾಗಿ ಆನು ದಾಂಭಿಕ ಕಾಣಿರೋ.

( ೬೭ )

## ನಿಷ್ಕಾಮ ಭಕ್ತಿ

ಮಾಡಿದೆನೆಂಬುದು ಮನದಲ್ಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ.
ಮಾಡಿದೆನೆನದಿರಾ ಲಿಂಗಕ್ಕೆ !
ಮಾಡಿದೆನೆನ್ನದಿರಾ ಜಂಗಮಕ್ಕೆ !
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ
ಬೇಡಿದ್ದನೀವನು **ಕೂಡಲ ಸಂಗಮ ದೇವಾ**

( ೬೮ )

## ದೇವರ ಕೃಪೆಯ ಹಿರಿಮೆ

ನೀನೊಲಿದರೆ ಕೊರಡು ಕೊನರುವದಯ್ಯ.
ನೀನೊಲಿದರೆ ಬರಡು ಹಯನಹುದಯ್ಯ.
ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯ.
ನೀನೊಲಿದರೆ ಸಕಲ ಪದಾರ್ಥ ಇದಿರಲ್ಲಿಪ್ಪುವು
**ಕೂಡಲ ಸಂಗಮ ದೇವಾ**

---

# ಮಕರಂದ

ಅಯಿ! ನಂದತನುಜ! ಕಿಂಕರಂ
ಪತಿತಂ ಮಾಂ ವಿಷಮೆ ಭವಾಂಬುಧೇ |
ಕೃಪಯಾ ನಿಜಪಾದಪಂಕಜ-
ಸ್ಥಿತಧೂಲಿಸದೃಶಂ ವಿಭಾವಯ ॥ ೧ ॥

ನ ಧನಂ ನ ಜನಂ ನ ಸುಂದರೀಂ
ಕವಿತಾಂ ವಾ ಜಗದೀಶ ಕಾಮಯೇ |
ಮಮ ಜನ್ಮನಿ ಜನ್ಮನೀಶ್ವರೇ
ಭವತಾದ್ಭಕ್ತಿರಹೈತುಕೀ ತ್ವಯಿ ॥ ೨ ॥

ನಯನಂ ಗಲದಶ್ರುಧಾರಯಾ
ವದನಂ ಗದ್ಗದರುದ್ಧಯಾ ಗಿರಾ |
ಪುಲಕೈರ್ನಿಚಿತಂ ಕದಾ ವಪುಃ
ತವ ನಾಮಗ್ರಹಣೇ ಭವಿಷ್ಯತಿ ॥ ೩ ॥

—ಶ್ರೀ ಚೈತನ್ಯ

— ೪೪ —

## ನನ್ನ ರೋಗವನ್ನು ಕಳೆ

( ರಾಗ—ಮುಖಾರಿ ಝಂಪೆತಾಳ )

ಆವ ರೋಗವು ಎನಗೆ ದೇವ ಧನ್ವಂತ್ರಿ ?
ಸಾವಧಾನದಿ ಎನ್ನ ಕೈಪಿಡಿದು ನೋಡಯ್ಯ ॥ ಪ ॥

ಹರಿಮೂರ್ತಿಗಳು ಎನ್ನ ಕಂಗಳಿಗೆ ಕಾಣಿಸವು
ಹರಿಯ ಕೀರ್ತನೆ ಕೇಳಿಸದೆನ್ನ ಕಿವಿಗೆ ।
ಹರಿಮಂತ್ರ ಸ್ತೋತ್ರ ಬಾರದು ಎನ್ನ ನಾಲಿಗೆಗೆ
ಹರಿಪ್ರಸಾದ ಜಿಹ್ವೆಗೆ ನವಿಯಾಗದಯ್ಯ ॥ ೧ ॥

ಹರಿಪಾದ ಸೇವೆಗೆನ್ನ ಹಸ್ತಗಳು ಚಲಿಸವು
ಗುರುಹಿರಿಯರಂಘ್ರಿಗೆ ಶಿರ ಬಾಗದು ।
ಹರಿಯ ನಿರ್ಮಾಲ್ಯವಾಘ್ರಾಣಿಸದು ನಾಸಿಕವು
ಹರಿಯಾತ್ರೆಗಳಿಗೆನ್ನ ಕಾಲೇಳವಯ್ಯ ॥ ೨ ॥

ಅನಾಥಬಂಧು **ಗೋಪಾಲವಿಠಲ**ರಾಯ
ಎನ್ನ ಭಾಗದ ವೈದ್ಯ ನೀನೆಯಾದಿ ।
ಅನಾದಿ ಕಾಲದ ಭವರೋಗ ಕಳೆಯಯ್ಯ
ನಾನೆಂದಿಗೂ ಮರೆಯೆ ನೀ ಮಾಡಿದುಪಕಾರ ॥ ೩ ॥

—ಗೋಪಾಲದಾಸ

— ೦ —

— ೪೫ —

## ತನುಮನಗಳು ನಿಮ್ಮನ್ನು ನೆನೆಯಲೀಯವು

( ರಾಗ—ಕನ್ನಡ ಝಂಪೆತಾಳ )

ತನುವಿನಾಗುಣವು ನಿ- । ಮ್ಮನು ನೆನೆಯಲೀಯದಲೆ ।
ಘನಮಹಿಮನೆ ಮುಂದೆ ಏನಪ್ಪುದೊ ? । ಪ ॥

ಅರಣ್ಯದೊಳಗಿಹೆನೆ? । ಧೀರತನವೆನಗಿಲ್ಲ ।
ಊರೊಳಗಿಹೆನೆ? ವಾಗ್ವಿಷಯ ಘನವು ॥
ಮಾರಾರಿ! ನೀ ಬೇರೆ । ಸೇರೆ ನಾನೆಂದೊಡಂ ।
ಯಾರು ನಾ ಮುಂದಕ್ಕೆ ಏನಪ್ಪೆನೊ? ॥ ೧ ॥

ಇರುಳು ನಾನೆನೆವೆನೆ? ಇರುಳು ನಿದ್ರೆಯ ಜಡವು ।
ಇರುವೆ–ನಗೆ ಹಗಲು ವ್ಯಾಪಾರ ಹಸಿವು ॥
ತೊರೆಯಲಾರೆನು ಅಶನ । ತರುಬಲಾರೆನು ನಿದ್ರೆ ।
ಮರುಳೆ ನಾ ಮುಂದೆ ಇನ್ನೇನೆಪ್ಪೆನೊ? ॥ ೨ ॥

ಘನವ ನಾ ನೆನೆವೆನೆ? ಮನ ಹಲವ ನೆನೆವುತಿದೆ ।
ಮನವ ಹಿಡಿತರುವನಕ ನಿಮಗೆ ಮುನಿಸು ॥
ಮನಭೋಗ ಬಯಸುವದು । ತನು ಸೊಬಗಿಗೆಳಸುವದು ।
ಘನಮಹಿಮ, ನಾ ಮುಂದೆ ಏನಪ್ಪೆನೊ? ॥ ೩ ॥

ಅಂಗವನು ವೇಷದಲಿ । ಸಿಂಗರಿಸಿ ಫಲವೇನು?
ಅಂಗದಲಿ ಮನ ಪ್ರಾಣ ಬೆರೆಯದನಕ ॥
ಅಂಗಜಾರಿಯೆ! ಎನ್ನ । ಸಂಗವನು ನೀನೊಲ್ಲೆ ।
ಲಿಂಗವೇ! ನಾ ಮುಂದೆ ಏನಪ್ಪೆನೋ? ॥ ೪ ॥

ಮನವು ಬೇರೆನ್ನುವನು । ಜಿನುಗಿ ಕಾಡುತಲಿದೆ ।
ನೆನಹಿಂಗೆ ಬಾರದಿರೆ ನೀನೆನ್ನುವ ॥
ಅನವರತ ಕಾಡುವಿಯೊ । ಅನುಪ್ರಾಣಿ ನೀ ಕರುಣ ।
ವನು ಮಾಡು **ಷಡಕ್ಷರಿ** ಲಿಂಗವೆ ॥ ೫ ॥

—ಷಡಕ್ಷರಿ

## ( ೫೬ )

## ಬಿನ್ನಹಕೆ ಬಾಯಿಲ್ಲವಯ್ಯ

( ರಾಗ — ಕಲ್ಯಾಣಿ – ಝಂಪೆ ತಾಳ )

ಬಿನ್ನಹಕೆ ಬಾಯಿಲ್ಲವಯ್ಯ !
ಅನಂತ ಅಪರಾಧ ಎನ್ನೊಳಗೆ ಇರಲಿಕ್ಕೆ ॥ ಪ ॥
ಶಿಶುಮೋಹ, ಸತಿಮೋಹ, ಜನನಿ ಜನಕರ ಮೋಹ
ರಸಿಕ ಭ್ರಾತರ ಮೋಹ ರಾಜಮೋಹ ।
ಪಶುಮೋಹ, ಭೂಮೋಹ, ಬಂಧುವರ್ಗದಮೋಹ
ಅಸುರಾರಿ ನಿನ್ನ ಮರೆತೆನೊ ಅಕಟ ಕಾಯೋ ॥೧ ॥
ಅನ್ನಮದ ಅರ್ಥಮದ ಅಖಿಳ ವೈಭವದಮದ
ಮುನ್ನ ಪ್ರಾಯದ ರೂಪ ಮೋಹ ಮದವೋ ।
ತನ್ನ ಸತ್ವದಾ ಮದ ಧಾತ್ರಿವಶವಾದ ಮದ
ಇನ್ನು ತನಗೆದುರಿಲ್ಲವೆಂತೆಂಬೊ ಮದದಿಂದ ॥ ೨ ॥
ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಸೆ
ಅಷ್ಟು ದೊರಕಿದರು ಮತ್ತಷ್ಟರಾಸೆ ।
ಕಷ್ಟಬೇಡೆಂಬಾಸೆ ಕಡುಸುಖವ ಕಾಂಬಾಸೆ
ನಷ್ಟಜೀವನದಾಸೆ **ಪುರಂದರವಿಠಲ** ॥ ೩ ॥

— ಪುರಂದರದಾಸ

—೦—

## —೫೭—

## ನಂಬಿದವರೊಡನೆ ಇಂತಣಕವೇ?

( ರಾಗ—ಮಧ್ಯಮಾವತಿ ಅಟತಾಳ )

ನೀನೊಲಿದುದಕಿಹಸೌಖ್ಯವೇ ? ರಂಗಾ ?
ನಾನೊಲ್ಲೆ ನಾನೊಲ್ಲೆ ಸರ್ವೇಶಾ ॥ ಪ ॥
ಸಾನುರಾಗದಲಿ ನೀ ಗತಿಯೆಂದು ನಂಬಿದ ।
ಮಾನವನೊಡನೆ ಇಂತಣಕವಾಡುವರೇನು ? ॥ ಅ ॥

ಷಡುರಸಯುಕ್ತ ಸುಭೋಜನವನ್ನು ।
ಬಿಡಿಸಯ್ಯ ದಾನವ ಭಂಜನಾ ।
ಒಡಲಿಗಾಗಿ ನಾ ನಿನ್ನಡಿಯ ಪೂಜಿಸಿದೆನೆ ?
ಒಡನೆ ದಾಟಿಸೋ ಭವಜಲಧಿಯಿಂದೆನ್ನ ।
ತೊಡಿಸದಿರು ದಿವ್ಯಾಂಬರಗಳನು ।
ಉಡಿಸಿ ಸ್ವರ್ಣಾಭರಣಗಳನು ॥
ತೊಡಿಸಿ ಬರಿ ಮಾತಾಡಿ ಮೋರೆಯ ।
ತಡವಿದರೆ ನಾನೊಲ್ಲೆ ದೇವಾ ॥ ೧ ॥

ಜನರು ಜನಪರಿಂದೆ ಮನ್ನಣೆ ನಸುವೊ ।
ಎನಗೆ ಒಲ್ಲದೊ ತಿಳಿ ನನ್ನಾಣೆ
ಮನುಜನಾಶ್ರಯಿಸಿದವನು ಬಯಸಲು ವಾ- ।
ಹನ–ರಥ–ಸೌಭಾಗ್ಯ–ಘನಪದ ದೊರಕದೆ ॥
ಜನುಮದಲಿ ಬಂದುದಕೆ ಬಹು ಸಾ-
ಧನವಿದಾಯಿತೆ? ನಿನ್ನ ದಾಸನೆಂ-
ದೆನಿಸದಲೆ ನಿಸ್ಸಾರವೇ ನಾ- ।
ರೆನಿಸಿ ತೋರ್ವರೆ ದೆವ ? ಸೈ ಸೈ ॥ ೨ ॥

ಕಂಡ ಕಂಡಲ್ಲೆ ತಿರುಗಿಸಿ ಎನ್ನ ।
ಧಂಡಧಂಡದಲಿ ಮರುಗಿಸಿ ।
ಮಂಡಲದೊಳು ಬಲು ಚಂಡನೆನಿಸಿ, ನಾನು ।
ಉಂಡ ವರಾನ್ನಕೆ ದಂಡನೆ ಪೊಂದುತೆ ॥
ತೊಂಡನಾದೆನು ಕರುಣಸಾಗರ ।
ಕಂಡ ಕಂಡದ ಕೊಡದೆ ನಿನ್ನಯ ॥
ಹಿಂಡ ಭಕುತರ ಸಂಗವೀವುದು ।
ಅಂಡಜಾಂಕನೆ! **ವಿಜಯ ವಿಠಲಾ** ॥ ೪ ॥

—ವಿಜಯದಾಸ

---

## ( ೪೮ )

# ಎನ್ನ ಕಾಯ ಬೇಕಯ್ಯ ಹರಿ

( ರಾಗ—ಜೋಗಿ ಝಂಪೆತಾಳ )

ನಿನ್ನನ್ನೆ ನಂಬಿದೆನೊ -
ನೀನೆನ್ನ ಸಲಹಯ್ಯ ॥ ಪ ॥

ಎನ್ನ ಗುಣದೋಷಗಳ -
ನೆಣಿಸದಿರಯ್ಯ ॥ ಅ ॥

ಬಾಲ್ಯದಲಿ ಕೆಲವು ದಿನ -
ಬರಿದೇ ಹೋಯಿತು ಹೊತ್ತು ।
ಮೇಲೆ ಯೌವನ ಬರಲು
ಮುಂಡರಿಯದಾದೆ ॥
ಜಾಲ ಸಂಸಾರದಲಿ -
ಸಿಲುಕಿ ಬಳಲಿದೆನಯ್ಯ ।
ಪಾಲಿಸೋ ಪರಮಾತ್ಮಾ
ಭಕುತಿಯನು ಕೊಟ್ಟು ॥ ೧ ॥

ಈ ತೆರದಿ ಕಳೆದೇನೊ
ಇಂದಿರೇಶನೆ ಕಾಲ ।
ಭೀತ ನಾಗದೆ ಯಮಗೆ
ಅಜ್ಞಾನದಿ ॥
ಮಾತೆ ಶಿಶುವನು ಕರೆದು -
ಮನ್ನಿಸುವ ತೆರನಂತೆ ।
ದಾತ **ಪುರಂದರ ವಿಠಲ**
ದಯ ಮಾಡಿ ಸಲಹೋ ॥ ೨ ॥

—ಪುರಂದರದಾಸ

—೦—

—೪೯—

## ನಿನ್ನ ಪಾದವೇ ಗತಿ

( ರಾಗ—ಕಾಂಬೋಧಿ ತ್ರಿಪುಟತಾಳ )

ಎಂದೆಂದು ನಿನ್ನ ಪಾದವೆ ಗತಿ ಎನಗೆ । ಗೋ- ।
ವಿಂದ ಬಾರಯ್ಯ ಎನ್ನ ಹೃದಯ ಮಂದಿರಕೆ ॥ ಪ ॥

ಮೊದಲಿಂದೆ ಬರಬಾರದು ನಾನು ಬಂದೆ
ತುದಿಮೊದಲಿಲ್ಲದ ಭವದಿಂದ ನೊಂದೆ ।
ಇದರಿಂದ ಗೆದ್ದು ಪೋಗುದ ಕಾಣೆ ಮುಂದೆ
ಪದುಮನಾಭನೆ ತಪ್ಪು ಕ್ಷಮೆ ಮಾಡು ತಂದೆ ॥ ೧ ॥

ಹೆಣ್ಣು ಹೊನ್ನು ಮಣ್ಣಿನಾಸೆಗೆ ಬಿದ್ದು
ಪುಣ್ಯಪಾಪವ ನಾನು ತಿಳಿಯದೆ ಇದ್ದು ।
ಅನ್ಯಾಯವಾಯಿತು ಇದಕೇನು ಮದ್ದು
ನಿನ್ನ ಧ್ಯಾನ ಎನ್ನ ಹೃದಯದೊಳಿದ್ದು ॥ ೧ ॥

ಹಿಂದೆ ನಾ ಮಾಡಿದ ಪಾಪವ ಕಳೆಯೆ
ಮುಂದೆನ್ನ ಜನ್ಮ ಸಫಲಮಾಡಿ ಪೊರೆಯೆ ।
ತಂದೆ **ಶ್ರೀಪುರಂದರ ವಿಠಲೆನ್ನ** ಪೊರೆಯೆ
ಎಂದೆಂದಿಗಾನಂದ ಸುಖವನ್ನೆ ಗರೆಯೆ ॥ ೩ ॥

—ಪುರಂದರದಾಸ

—೫೦—

## ಬೇರೆ ಗತಿಯಾರೆನಗೆ

( ರಾಗ—ಸಾವೇರಿ ಝಂಪೆತಾಳ )

ನೀನುಪೇಕ್ಷೆಯ ಮಾಡೆ ಬೇರೆ ಗತಿಯಾರೆನಗೆ
ನಿಗಮಗೋಚರ ಮುಕುಂದಾ ॥ ಪ ॥

ಗಾನ-ರಸ-ಲೋಲ ಆಗಮಶೀಲ ಭಕ್ತಜನ- ।
ಪಾಲ ವಸುದೇವ ಬಾಲಾ ॥ ಅ ॥

ಜಪತಪಾನುಷ್ಠಾನ ಗೈದು ನಿನ್ನನು ನೆನೆಯೆ ।
ಜಾಣತನವೆನ್ನೊಳಿಲ್ಲ ॥
ಗುಪಿತದಲಿ ದಾನ ಧರ್ಮವ ಮಾಳ್ಪೆನೆಂದುದಕೆ ।
ಘನವಾದ ಧನವು ಇಲ್ಲ ॥
ಅಪರಮಿತ ಕರ್ಮಗಳ ಅನುಸರಿಸಿ ನಡೆವುದಕೆ ।
ನಿಪುಣತ್ವ ಮೊದಲೆ ಇಲ್ಲ ॥
ನಿಪುಣತ್ವ ಜಾಣತನವಿಲ್ಲದಿಹ ಕೃಪಣನಿಗೆ ।
ಸುಪವಿತ್ರನಾಗದಲೆ ಗತಿಯು ಇಲ್ಲ ॥ ೧ ॥

ಆನೆ ನೆಗಳಿಗೆ ಸಿಲುಕಿ ಅರೆಬಾಯಿ ಬಿಡುತಿರಲು ।
ಮೌನದಲಿ ಬಂದು ಪೊರೆದೆ ॥
ಹೇ ನಾರಗಾ! ಎಂದು ಕೂಗಿದ ಅಜಾಮಿಳಗೆ ।
ನೀನೊಲಿದು ಕೃಪೆಮಾಡಿದೆ ॥
ಹಾನಿಯಿಲ್ಲದ ಪದವಿ ಧ್ರುವರಾಯನಿಗೆ ಕೊಟ್ಟು ।
ದೀನತನವನು ಬಿಡಿಸಿದೆ ॥
ದಾನವಾಂತಕ ಸಕಲ ದಿವಿಜರೊಡೆಯನೆ ಕೃಷ್ಣ ।
ನೀನೆನ್ನ ಸಲುಹದಿರೇನಯ್ಯ ಬರಿದೆ। ॥ ೨ ॥

ಈಷಣತ್ರಯದಿ ಬಯಲಾಶಯಲಿ ಭ್ರಮೆಗೊಂಡು ।
ಮೋಸ ಹೋಗಿಹೆನು ಇಂದು ॥
ಬೇಸರದಿ ಮನನೊಂದು ಮಾಯಕ್ಕೆ ಸಿಲುಕಿ ನಾ- ।
ಗಾಸಿ ಬಡಲಾರೆನೆಂದು ॥
ವಾಸುವೇವನೆ ನಿನ್ನ ಪೊಂದಿ ಬದುಕುವೆನೆಂದು ।
ಆಶೆ ಬಡುತಿಹೆನು ಇಂದು ॥
ದಾಸನೆಂದೆನಿಸಿ ಡಂಗುರ ಹೊಯ್ಸಿ **ಬಡದಾದಿ** ।
**ಕೇಶವನೆ** ಕರುಣಿಸಿಂದೆನ್ನನು ಬಂದು ॥ ೩ ॥

— ಕನಕದಾಸ

— ೦ —

( ೫೧ )

## ಇದೇ ಸಲಹುವ ಸಮಯ

( ರಾಗಃ— ಅರಬಿ ಆದಿತಾಳ )

ಇದೇ ಸಮಯ ಹರಿಯೇ । ದೊರೆಯೇ ॥ ಪ ॥

ಇದೇ ಸಮಯ ನಿನ್ನ । ಪದಾಬ್ಜ ತೋರುತೆ ।
ಸದಾ ಎನ್ನನು ನೋಡಿ । ಮುದದಿ ಸಲಹುವರೆ ॥ ಅ ॥

ನಾನಾ ಜನ್ಮದಿ ಬಂದು । ಜ್ಞಾನ ವಿಹೀನನಾಗಿ ।
ದೀನನಾದವಗೆ ಸು – ।ಜ್ಞಾನ ಪಾಲಿಸುವರೆ ॥ ೧ ॥

ಆಶಾಪಾಶದಿ ಸಿಕ್ಕಿ । ಶ್ರೀಶಾ ! ಮರೆತೆ ನಿನ್ನ ।
ಲೇಸು ದಾರಿಯ ತೋರಿ । ದಾಸನ ಕಾಯುವರೆ ॥ ೨ ॥

ಸಂತರ ಸಂಗವ ಸಂತತ ಪಾಲಿಸಿ ।
ಅಂತರಂಗದ ಏ - । ಕಾಂತ ಭಜನೆಗಾಗಿ ॥ ೩ ॥

ಹಿಂದಿನ ಸುಕೃತದಿ । ಬಂದೆ ಮಾನವನಾಗಿ ।
ಮುಂದಿನ ಪದವನು । ಒಂದಿಸಿ ಪೊರೆಯಲು ॥ ೪ ॥

ಶ್ರೀಪತಿ **ವಿಜಯ ವಿ-** । **ಠ್ಠಲ** ಶ್ರೀವೆಂಕಟ ।
ತಾಪತ್ರಯದಿಂ- । ಕಾಪಾಡುವುದಕೆ ॥ ೫ ॥

—ವಿಜಯದಾಸ

—o—

( ೫೨ )

## ನನ್ನ ಏಕಮೇವ ಬೇಡಿಕೆ

( ರಾಗ—ಪೂರ್ವಿ ಅಟತಾಳ)

ನಾ ನಿನ್ನೊಳನ್ಯ ಬೇಡುವುದಿಲ್ಲ । ಎನ್ನ ।
ಹೃದಯ ಕಮಲದಲಿ ನಿಂದಿರು ಹರಿಯೆ ॥ ಪ ॥

ಶಿರ ನಿನ್ನ ಚರಣಕೆ ಎರಗಲಿ । ಎನ್ನ ।
ಚಕ್ಷು ಸದಾ ನಿನ್ನ ನೋಡಲಿ ಹರಿಯೆ ॥
ಕರ್ಣ ಗೀತಂಗಳ ಕೇಳಲಿ । ನಿನ್ನ ।
ನಿರ್ಮಾಲ್ಯವ ನಾಸ ಘ್ರಾಣಿಸಲಿ ಹರಿಯೆ ॥ ೧ ॥

ನಾಲಿಗೆ ನಿನ್ನ ಕೊಂಡಾಡಲಿ । ಎನ್ನ ।
ಕರಗಳೆರಡು ನಿನ್ನನರ್ಚಿಸಲಿ ಹರಿಯೆ ॥
ಚರಣ ತೀರ್ಥಯಾತ್ರೆ ಮಾಡಲಿ । ಎನ್ನ ।
ಮನ ಅನುದಿನ ನಿನ್ನ ಸ್ಮರಿಸಲಿ ಹರಿಯೆ ॥ ೨ ॥

ಬುದ್ಧಿ ನಿನ್ನೊಳು ಬೆರೆಯಲಿ । ಎನ್ನ ।
ಚಿತ್ತ ನಿನ್ನೊಳು ಸ್ಥಿರವಾಗಲಿ ಹರಿಯೆ ॥
ಭಕ್ತಜನರ ಸಂಗವಾಗಲಿ । **ಪುರಂದರ** ।
**ವಿಠಲನೆ** ಇಷ್ಟೇ ದಯಮಾಡು ಹರಿಯೆ ॥ ೩ ॥

—ಪುರಂದರದಾಸ

—o—

## ( ೫೩ )

## ಹೃದಯದಿಂದಗಲದಿರು

( ರಾಗ—ಕಾಂಬೋದಿ ಝಂಪೆತಾಳ )

ಕರುಣಿಸೋ ಗುರು ಎನಗೆ
ಅರಗಳಿಗೆನ್ನ ಹೃದಯದಿಂದಗಲದ್ಹಾಂಗೆ ॥ ಪ ॥

ಬೇಡುವದೊಂದೆ ನಾ ಬಿಡದೆ ನಿಜರೂಪವ
ಪೊಡವಿಯೊಳಗೆ ದೃಢ ನಿಶ್ಚಯದಿ ।
ಎಡಬಲ ನೋಡದೆ ಒಡಲು ಹೊಕ್ಕಿಹೆ ನಿನ್ನ
ಕಡೆಗಾಣಿಸುವದೆನ್ನೊಡೆಯನೆ ಪಿಡಿದು ಕೈ ॥ ೧ ॥

ಕಣ್ಣಿನಿಂದಲೆ ನಿನ್ನ ಕಾಣದಿದ್ದರೆ ಪೂರ್ಣ
ಪ್ರಾಣ ನಿಲ್ಲದೊ ನಿಮಿಷಾರ್ಧದಲಿ ।
ಕ್ಷಣ ಕ್ಷಣಕೊದಗಿ ನೀ ಖೂನದೋರದಿದ್ದರೆ
ತನು ವಿಕಲಿತವಾಗಿ ಕ್ಷೀಣಹೊಂದುವದೋ ॥ ೨ ॥

ಸುತ್ತಿ ಸುಳಿವುತವೆನ್ನ ಚಿತ್ತದಿಂದಗಲದೆ
ನಿತ್ಯವಾಗಿರೊ ಹೃತ್ಕಮಲದಲಿ ।
ಹೆತ್ತತಾಯಿಯೋಪಾದಿ ತುತ್ತು ತುತಿಗೆ ಒಮ್ಮೆ
ಹತ್ತಲಿದ್ದು ಸಂತತ ನಲಹೊ **ಮಹಿಪತಿಗೆ** ॥ ೨ ॥

—ಮಹಿಪತಿ

—೦—

## ( ಆ ) ಪದ್ಯಗಳು:—

### [ ೨೫ ]
### ಮನದ ಮಂಗತನ ಬಿಡಿಸು

ಒಮ್ಮೆ ಸಂಸಾರವನು ತೊರೆಯಬೇಕೆಂದೆಂಬು
ದೊಮ್ಮೆ ಸಂಸಾರವನು ಮಾಡಬೇಕೆಂದೆಂಬು
ದೊಮ್ಮೆ ದೇವರ ಭಜನೆಯನು ಮಾಡಿ ನಿತ್ಯಪದವಿಯ ಪಡೆಯಬೇಕೆಂಬುದು ।

ಒಮ್ಮೆ ದೇವರ ಭಜನಿಯಿಂದೇನು ಫಲವೆಂದು
ಹಮ್ಮೈಸಿ ಹರಿವುತಿಹ ಮನವನೊಬ್ಬುಳಿಗೊಳಿಸಿ
ನಿಮ್ಮ ಸ್ಮರಣೆಯೋಳಿರಿಸು, ನಿಜಲಿಂಗ ಭವಭಂಗ ಶರಣ ಜನಭಕ್ತ
ಸಂಗಾ ॥ ೧ ॥

ನಿತ್ಯವಾದುದನೆಲ್ಲ ಹಿಡಿಯಲೊಲ್ಲದು ಮನವು
ಸತ್ಯವಾಗಿರದಡಗಿ ಕೊಂಡಿಹುದು ಆ ಮನವು
ಸತ್ಯಕ್ಕೆ ಕುಣಿಕುಣಿದು ಬರುತಿಹದದೊಮ್ಮೆ ಸತ್ಯವ ಬಿಟ್ಟು ಪೃತಿಯುತಿಹುದು ।

ಮೃತ್ಯುಂಜಯನೆ ನಿಮ್ಮ ಮರೆಹೊಕ್ಕೆ ದುರ್ಮನವ
ಕತ್ತರಿಸಿ ಸನ್ಮಾರ್ಗದೊಳು ಬಿಡದೆ ಮನವಿತ್ತು
ನಿತ್ಯ ಸಲಹುವದೆನ್ನ ನಿಜಲಿಂಗ .... . ಸಂಗಾ ॥ ೨ ॥

ಪರುಸಲೋಹವನು ತನ್ನಂತೆ ಮಾಡುವತೆರದಿ
ಕುರುಡಿವನ ಪುಳುವು ತನ್ನಂತೆ ಮಾಡುವತೆರದಿ
ಪರಿಮಳಿಪ ಚಂದನವು ತಾ ಮರವ ತನ್ನಂತೆ ಮಾಡಿಕೊಂಬುದ ತೆರದೊಳು ।

ಪರಶಿವನೆ ನಿನ್ನ ಭಕ್ತರಿಗೆ ಸ್ಥಿರಪದವೀವ
ಬಿರುದಾಂಕನೆಂದು ನಂಬಿದೆನೆನ್ನ ಭವವನ್ನು
ಪರಿಹರಿಸಿ ಸಲಹಯ್ಯ! **ನಿಜಲಿಂಗ** . . ಸಂಗಾ ॥ ೩ ॥

—ನಿಜಲಿಂಗ

## [ ೨೬ ]
## ಮನವು ನಾಮವ ಮರೆಯದಂತಿರಿಸು

ಎನ್ನೊಳಪರಾಧವೇನಯ್ಯ ದೇವರದೇವ!
ನಿನ್ನಿಂದ ನಡೆವವನು, ನಿನ್ನಿಂದ ನುಡಿವವನು
ನಿನ್ನಿಂದ ಸಕಲ ಸುಖದುಃಖಗಳನನುಭವಿಸಿಕೊಂಡಿರ್ಪ ಬಡವ ನಾನು ।

ಪನ್ನಗ ವಿಭೂಷಣನೆ! ಪಾವನ್ನ ವಿಗ್ರಹನೇ!
ನಿನ್ನ ಧ್ಯಾನವ ಮರೆಯದಂತೆ ಸದ್ಗುಣವಿತ್ತು
ಎನ್ನ ಸಲಹುವದಯ್ಯ! ನಿಜಲಿಂಗ ಭವಭಂಗ ಶರಣಜನ ಭಕ್ತ
ಸಂಗಾ ॥ ೧ ॥

ನಿಮ್ಮ ನಾಮಾಮೃತವ ಹಾ! ಎಂದು ಸವಿವಂತೆ
ನಿಮ್ಮ ನಾಮವ ನುತಿಸಿ ಅಡಿಗಡಿಗೆ ಕುಣಿವಂತೆ
ನಿಮ್ಮ ನಾಮವ ನೆನೆದು ಹರುಷಾಬ್ಧಿಯೊಳು ಪೊಕ್ಕು ನಲಿದು ಈಸಾಡುವಂತೆ।

ನಿಮ್ಮ ನಾಮಂಗಳನು ನುತಿಸಿ ಮೈಮರೆವಂತೆ
ನಿಮ್ಮ ನಾಮವ ಸತತ ಮನ ಮರೆಯದಿರುವಂತೆ
ನಿಮ್ಮ ನಾಮದೊಳಿರಿಸು ನಿಜಲಿಂಗ ಭವಭಂಗ ಸಂಗಾ ॥ ೨ ॥

ಮೊಲೆವಾಲಮೇಲೆ ಬಾಲಕರ ಮನವಿರುವಂತೆ
ಜಲಜ ಪರಿಮಳಕೆ ಷಟ್ಪದಿಯ ಮನವಿರುವಂತೆ ಭಕ್ತಿಯಿಂದ ।
ಚೆಲುವ ಚಂದ್ರಮನ ಹಂಬಲು ಚಕೋರಕಿರುವ ತೆರನಂತೆ

ಒಲಿದು ಶಿವ ನಿಮ್ಮ ಧ್ಯಾನವ ಮಾಳ್ಪ ಸಜ್ಜನರ
ಹಲವು ದೋಷಗಳೆಲ್ಲ ಕಳೆದು ಮರಮರಳಿ ಭವ-
ದಲಿ ಬಾರದೊಲು ಮಾಡು **ನಿಜಲಿಂಗ** ಸಂಗಾ ॥ ೩ ॥

—ನಿಜಲಿಂಗ

—೦—

## [ ೨೭ ]
## ನಿನ್ನೆಡೆಬರುವಂತೆ ಮಾಡುವದು ಎಂದು ?

ಕರೆವುದದೆಂದು ಕಾಲ್ವಿಡಿಸಿಕೊಳ್ವುದದೆಂದು ದಯಾಕಟಾಕ್ಷದಿಂ
ಪೊರೆವುದದೆಂದು ಮೆಲ್ನುಡಿಗಳಿಂ ಮುದವೇರಿಪುದೆಂದು ನೋಂಕಿನಿಂ ।
ಹರಿವುದದೆಂದು ಸಂತಸದೆ ಪೆರ್ಚಿಪುದಿದೆಂದು ಮನಸ್ವಿ ನೀಂ ಕರಂ-
ಕರಗಿವುದೆನ್ನನೆಂದೊಸೆದು ಪೇಳೆನಗಿಂದೆಲೆ ಹಂಪೆಯಾಳ್ದನೇ ॥ ೧ ॥

ನೋಡದ ಕಣ್ಗಳೇಕೆ, ಸತಿ ಕೇಳದ ಕರ್ಣಮದೇಕೆ ಭಕ್ತಿಯಿಂ
ಪಾಡದ ಬಾಯದೇಕೆ, ಪೆಸರ್ಗೊಳ್ಳದ ಜಿಹ್ವೆಯದೇಕೆ ಪೂಜೆಯಂ ।
ಮಾಡದ ಕೈಗಳೇಕೆ, ನೆರೆನೋಂಕದ ದೇಹಮದೇಕೆ ಕೂಡಿಯು-
ಳ್ಳಾಡದ ಚಿತ್ತವೇಕೆನಗೆ ಹಂಪೆಯ ಲಿಂಗವೆ ನಿಮ್ಮೊಳಳ್ಕರಿಂ ॥ ೨ ॥

ಸತಿಪುತ್ರರ್ ಮಿತ್ರರಾಪ್ತರ್ ತನುಮನಧನವೆಂ-
ಬಿಂತಿವಂ ನಿತ್ಯಮೆಂದು-
ಚ್ಚತರ ವ್ಯಾಸಂಗದಿಂ ಮೆಯ್ಯರಿಯದೆ ಮರುಳಾ-
ನಿರ್ದೆನೆಂನ್ನಂ ದುರಾಶಾ ।
ವೃತನಂ ದುರ್ಮೋಹಿಯಂ ದುಸ್ತರತರ ವಿಷಯ-
ವ್ಯಾಪ್ತನಂ ದುರ್ಧರೈನೋ-
ಹತನಂ ದುರ್ಬೋಧನಂ ರಕ್ಷಿಪುದೆಲೆ ಕೃಪೆಯಿಂ-
ದಂ ವಿರುಪಾಕ್ಷಲಿಂಗಾ ॥ ೩ ॥

ನಾನಾಜನ್ಮಂಗಳೊಳ್ ಬಾರದ ಪರಿಭವಮುಂ
ಬಂದ ತನ್ನಂದ ಮುಂ ತಾ-
ನೇನೆಂದೊಂದೆಳ್ಳ ನಿತ್ತುಂ ನೆನೆಯದು ತನಗೆಂ-
ತಿಚ್ಛೆಯಂತಿರ್ದು ನಿನ್ನೀ- ।
ಧ್ಯಾನಾರಂಭಕ್ಕಣಂ ಸಲ್ಲದು ಸುಡು ನುಡು ಚಿ
ಮನ್ಮನೋವೃತ್ತಿ ನಿನ್ನಂ
ತಾನಾರೆಂ ನೀನೆ ಸಂತಂ ನಿಲಿಸಿದನೊಲಿವಿಂ-
ದಂ ವಿರುಪಾಕ್ಷಲಿಂಗಾ ॥ ೪ ॥

ಹರಹರ ಕರ್ಮದೊಳ್ ಬಳಲದಿಂತು
ಬದುಕಿದೆನ್ನೈ ಸದಾಶಿವಾ !
ನರಪರ ಸೇವೆಯೊಳ್ ಕುದಿಯದಿಂತು
ಬದುಕಿದೆನ್ನೈ ಮುಖಾರಿ ಅ– ।
ಸ್ಥಿರ ಪರದೈವದೊಳ್ ತೊಡರದಿಂತು
ಬದುಕಿದೆನ್ನೈ ಮಹೇಶ ! ಮ–
ದ್ಗುರುವೆ ಪುರಾರಿ ! ಪೂಜ್ಯನೆ ! ನಿಜಾಂಘ್ರಿ
ಸಾರ್ದಲೆ ಹಂಪೆಯಾಳ್ದನೇ ! ॥ ೫ ॥

—ಹರಿಹರ

## ( ಇ ) ವಚನಗಳು:—

### ( ೬೯ )
### ಮನವು ವಿಷಯಕ್ಕೆ ಹರಿವುದು

ಅಂದಣವನೇರಿದ ಸೊಣಗನಂತೆ,
ಕಂಡದ ಬಿಡದು, ತನ್ನ ಮುನ್ನಿನ ಸ್ವಭಾವವನು.
ಸುಡು ! ಸುಡು ! ಮನವಿದು ವಿಷಯಕ್ಕೆ ಹರಿವುದು.
ಮೃಡ ! ನಿಮ್ಮನನುದಿನ ನೆನೆಯಲೀಯದು.
ಎನ್ನೊಡೆಯ **ಕೂಡಲಸಂಗಮದೇವ !**
ನಿಮ್ಮ ಚರಣವ ನೆನೆವಂತೆ ಕರುಣಿಸೋ
ಸೆರಗೊಡ್ಡಿ ಬೇಡುವೆ ನಿಮ್ಮ ಧರ್ಮ.

### ( ೭೦ )
### ವಿಷಯರಹಿತನ ಮಾಡು

ವಿಷಯವೆಂಬ ಹಸುರನ್ನು,
ಎನ್ನ ಮುಂದೆ ಪಸರಿಸದಿರಯ್ಯ !
ಪಶುವೇನು ಬಲ್ಲದು, ಹಸುರೆಂದೆಳಸುವದಲ್ಲದೆ ?
ವಿಷಯರಹಿತನ ಮಾಡಿ; ಭಕ್ತಿರಸವ ದಣಿಯೆ ಮೇಯಿಸಿ,
ಸುಬುದ್ಧಿಯೆಂಬ ಉದಕವನೆರೆದು,
ನೋಡಿ ಸಲಹಯ್ಯಾ **ಕೂಡಲಸಂಗಮದೇವಾ.**

### ( ೭೧ )
### ಹಸಿವು ನಿದ್ರೆಯ ಬಿಡಿಸು

ಹಗಲು ನಿನ್ನ ನೆನೆಯಲಿಲ್ಲ ಹಸಿವು ತೃಷೆಯಿಂದ.
ಇರುಳು ನಿನ್ನ ನೆನೆಯಲಿಲ್ಲ ನಿದ್ರೆಭರದಿಂದ,
ಎರಡರ ಬಾಧೆಗೆ ಒಳಗಾದೆನೋ !
**ಪುರಂದರ ವಿಠಲ**

( ೭೨ )

## ನಿನ್ನ ನೆನೆವ ಚಿಂತೆ

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ.
ಅಂಬುಜಕೆ ಭಾನುವಿನ ಉದಯದ ಚಿಂತೆ.
ಭ್ರಮರಂಗೆ ಪರಿಮಳದ ಬಂಡನುಂಬ ಚಿಂತೆ,
ಎನಗೆ ನಮ್ಮ **ಕೂಡಲಸಂಗಮದೇವರ**
ನೆನೆವ ಚಿಂತೆ.

( ೭೩ )

## ನಿಮ್ಮನುಳಿದು ಅನ್ಯದಕ್ಕೆಳಸದು ಮನ

ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವದೇ ನವಿಲು?
ಕೊಳನಲ್ಲದೆ ಕಿರಿವೆಳ್ಳಕೆಳಸುವದೇ ಹಂಸೆ?
ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ?
ಪರಿಮಳವಲ್ಲದ ಪುಷ್ಪಕ್ಕೆಳಸುವದೇ ಭ್ರಮರ?
ಎನ್ನ ದೇವ **ಚನ್ನ ಮಲ್ಲಿಕಾರ್ಜುನ**ನಲ್ಲದೆ,
ಅನ್ಯಕ್ಕೆಳಸುವದೇ ಎನ್ನ ಮನ?

( ೭೪ )

## ನೀವಲ್ಲದೆ ಎನಗಾರಯ್ಯ

ಸಮುದ್ರದಲ್ಲಿಯ ಸಿಂಪಿಯಂತೆ,
ಬಾಯ್ಬಿಡುತ್ತಲಿದ್ದೇನಯ್ಯ!
ನೀವಲ್ಲದೆ ಮತ್ತಾರೂ ಎನ್ನವರಿಲ್ಲ ನೋಡಯ್ಯ.
**ಕೂಡಲಸಂಗಮದೇವ**ಯ್ಯ
ನೀವಲ್ಲದೊಳಕೊಂಬವರಿಲ್ಲ ನೋಡಯ್ಯ.

## ( ೭೫ )
## ಸಂತತವಾದ ನೆನವು

ಹಿಂಡಿನಗಲಿ ಹಿಡಿವಡೆದ ಕುಂಜರ,
ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯ !
ಬಂಧನಕ್ಕೆ ಬಂದ ಗಿಳಿ,
ತನ್ನ ಬಂಧುವ ನೆನೆವಂತೆ ನೆನೆವೆನಯ್ಯ !
ಕಂದಾ ನೀನಿತ್ತ ಬಾ! ಎಂದು ನೀವು
ನಿಮ್ಮಂದ ತೋರಯ್ಯ **ಚೆನ್ನಮಲ್ಲಿಕಾರ್ಜುನ !**

## ( ೭೬ )
## ಹಗಲಿರುಳು ನಿಮ್ಮ ಕಳವಳ

ಹಗಲು ನಾಲ್ಕು ಜಾವು ನಿಮ್ಮ ಕಳವಳದಲ್ಲಿರ್ದೆನೋಡಯ್ಯ.
ಇರುಳು ನಾಲ್ಕು ಜಾವು ನಿಮ್ಮ ವಿಕಳಾವಸ್ಥೆಯಲ್ಲಿರ್ದೆನೋಡಯ್ಯ !
ಇರುಳು ಹಗಲು ನಿಮ್ಮ ಕಳವಳದಲ್ಲಿ ಮರೆದೊರೆಗಿದೆನಯ್ಯ !
**ಚೆನ್ನಮಲ್ಲಿಕಾರ್ಜುನ,** ನಿಮ್ಮೊಲುಮೆ ನೆಟ್ಟು,
ಹಸಿವೆ ತೃಷೆ ನಿದ್ರೆಯು ಮರೆತೆನು.

---

# ಮಕರಂದ

ಸರ್ವಧರ್ಮಾನ್ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ ।
ಅಹಂ ತ್ವಾಂ ಸರ್ವಪಾಪೇಭ್ಯೋ
ಮೋಕ್ಷಯಿಷ್ಯಾಮಿ ಮಾ ಶುಚಃ ॥ ೧ ॥

ಅನನ್ಯಚೇತಾಃ ಸತತಂ
ಯೋ ಮಾಂ ಸ್ಮರತಿ ನಿತ್ಯಶಃ ।
ತಸ್ಯಾಹಂ ಸುಲಭಃ ಪಾರ್ಥ
ನಿತ್ಯಯುಕ್ತಸ್ಯ ಯೋಗಿನಃ ॥ ೨ ॥

ಮಯ್ಯೇವ ಮನ ಆಧತ್ಸ್ವ
ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ
ಅತ ಊರ್ಧ್ವಂ ನಸಂಶಯಃ ॥ ೩ ॥

—ಶ್ರೀ ಗೀತಾ

—೫೪—

## ಸೂತ್ರಧಾರಿ ನೀನು

( ರಾಗ—ಕೇದಾರಗೌಳ ಝಂಪೆತಾಳ)

ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ ।
ಕಪಟನಾಟಕ ಸೂತ್ರಧಾರಿ ನೀನೇ ॥ ಪ ॥

ನೀನೇ ಆಡಿಸದಿರಲು ಜಡ ಒನಿಕೆಯಾ ಬೊಂಬೆ ।
ಏನು ಮಾಡಲು ಬಲ್ಲದೈ ! ತಾನೆ ಬೇರೆ ॥
ನೀನಿಟ್ಟ ಸೂತ್ರದಿಂ ಚಲಿಸುವವು ಕೈಕಾಲು ।
ನೀನೆ ಮುಗ್ಗಿಸಲು ಮುಗ್ಗುವ ದೇಹದವನು ॥ ೧ ॥

ಒಂದೆಂಟು ಬಾಗಿಲುಗಳಿಹ ಪಟ್ಟಣಕೆ ತನ್ನ— ।
ವೆಂದು ಇಪ್ಪತ್ತಾರು ಮನೆಯಾಳ್ಗಳ ॥
ತಂದು ಕಾವಲಿಗಿರಿಸಿ ಎನ್ನನೀ ಒಳಗಿಟ್ಟು ।
ಮುಂದೆ ಭಾವದಲಿ ಭವಣಿಪುದು ನಿನ್ನದನ್ಯಾಯ ॥ ೨ ॥

ಯಂತ್ರವಾಹಕ ನೀನೆ ಒಳಗಿದ್ದುಯೆನ್ನನು ಸ್ವ— ।
ತಂತ್ರನೆಂದೆನಿಸಿ ಕೊಲಿಸುವರೆ ! ದೇವಾ ॥
ಕಂತುಪಿತ ಲಕ್ಷ್ಮೀಶ ! ಎಂತು ನಾ ಬಾಳುವುದ— ।
ನಂತಮೂರುತಿ ನಮ್ಮ **ಪುರಂದರ ವಿಠಲಾ** ॥ ೩ ॥

—ಪುರಂದರದಾಸ

—೦—

—೫೫—

## ನಿನ್ನ ಪ್ರೇರಣೆಯಿಂದ ನಡೆವೆ ನುಡಿವೆ

( ರಾಗ—ಮುಖಾರಿ ಅಟತಾಳ )

ನನ್ನಿಂದ ನಾನೇ ಜನಿಸಿ ಬಂದೆನೆ ದೇವ ॥ ಪ ॥
ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ ।
ನಿನ್ನದೆ ತಪ್ಪೊ ! ಎನ್ನದೆ ತಪ್ಪೊ ! ಪರಮಾತ್ಮ ॥ ಅ ॥

ಜನನಿಯ ಜಠರದಿ ನವಮಾಸವು ।
ಘನತೆಯಿಂದಲಿ ಪೋಷಿಸುತಿರೆ ನಾನು ॥
ಜನಿಸಲಾರೆನೆನೆ ಜನಿಸೆಂದಿಕ್ಕಳದಿಂದ ।
ವನಜಾಕ್ಷ ! ನೂಕಿದವನು ನೀನಲ್ಲವೆ ! ಕೃಷ್ಣ ॥ ೧ ॥

ಅಂಧನ ಕೈಯಲಿ ಕೋಲಿತ್ತು ಕರೆದೊಯ್ದು ।
ಹಿಂದೆ ಮುಂದಾಡಿಯು ಕೆಡಹೆ ಬೀಳಲು ॥
ಅಂಧಕನದೆ ತಪ್ಪೊ ! ಮುಂದಾಡಿಯ ತಪ್ಪೊ ! ।
ಹಿಂದಾಡಬೇಡ ತನ್ನೊಳು ತಪ್ಪಿಲ್ಲವೊ ರಂಗಾ ! ॥ ೨ ॥

ಕಂದನ ತಾಯಿಯು ಆಡಿಸುತಿರೆ ಪೋಗಿ ।
ಕಂದ ಬಾವಿಯನೋಡಿ ಬೀಳುತಿರೆ ॥
ಬಂದು ಬೇಗನೆ ತೆಗೆದಪ್ಪದಿರಲು ಆ ।
ಕಂದನ ತಪ್ಪೊ ! ಮಾತೆಯ ತಪ್ಪೊ ! ಪರಮಾತ್ಮ ॥ ೩ ॥

ಭಾರವು ನಿನ್ನದೊ ಇರು ನಿನ್ನದೊ ಕೃಷ್ಣ ।
ನಾರಿ ಮಕ್ಕಳು ಮನೆ ನಿನ್ನವಯ್ಯ ॥
ಕ್ಷೀರದೊಳಗೆ ಅದ್ದೊ ! ನೀರಿನೊಳಗೆ ಅದ್ದೊ ।
ಹೇರನೊಪ್ಪಿಸಿರಲು ಸುಂಕವೇತರದಯ್ಯ ॥ ೪ ॥

ನ್ಯಾಯವಾದರು ದುಡುಕು ನಿನ್ನದು ಅ- ।
ನ್ಯಾಯವಾದರು ಪೇಳುವವರಾರೆನಗೆ ॥
ಕಾಯಜಪಿತ **ಕಾಗಿನೆಲೆಯಾದಿಕೇಶವ**- ।
**ರಾಯ !** ನೀ ಕಾಯಯ್ಯ ! ತಪ್ಪುಗಳೆಣಿಸದೆ ॥ ೫ ॥

—ಕನಕದಾಸ

— ೦ —

— ೫೬ —

## ನಿನ್ನನ್ನು ತೊರೆದು ಜೀವಿಸಬಹುದೆ ?

(ರಾಗ—ಬಾಗೇಶ್ರೀ ಝಂಪೆತಾಳ)

ತೊರೆದು ಜೀವಿಸಬಹುದೆ ಹರಿ ನಿನ್ನ ಚರಣವನು ।
ಕರಪಿಡಿದು ಸಲಹೆನ್ನ ಕರುಣಸಾಗರನೇ ! ॥ ಪ ॥

ತಾಯತಂದೆಯ ಬಿಟ್ಟು ತಪವಮಾಡಲು ಬಹುದು ।
ದಾಯಾದಿ ಬಂಧುಗಳ ಬಿಡಲು ಬಹುದು ॥
ರಾಯ ತಾ ಮುನಿದರೆ ರಾಜ್ಯವನು ಬಿಡಬಹುದು ।
ಕಾಯಜನಪಿತ ನಿನ್ನ ಅಡಿಯ ಬಿಡಲಾಗದು ॥ ೧ ॥

ಒಡಲು ಹಸಿದರೆಯು ಅನ್ನವನು ತ್ಯಜಿಸಲುಬಹುದು ।
ಪಡೆದ ಭೂಮಿಯ ಬಿಟ್ಟು ಹೊರಡಬಹುದು ॥
ಮಡದಿ ಮಕ್ಕಳನೆಲ್ಲ ತೊಲಗಿ ಪೋಗಲುಬಹುದು ।
ಕಡಲೊಡೆಯ ನಿನ್ನಡಿಯ ಗಳಿಗೆ ಬಿಡಲಾಗದು ॥ ೨ ॥

ಪ್ರಾಣವನು ಪರರಿಂಗೆ ಬೇಡಿದರೆ ಕೊಡಬಹುದು ।
ಮಾನಾಭಿಮಾನವನು ತಗ್ಗಿಸಲುಬಹುದು ॥
ಪ್ರಾಣನಾಯಕನಾದ **ಆದಿಕೇಶವರಾಯ** ।
ಜಾಣ ! ಶ್ರೀಕೃಷ್ಣ ನಿನ್ನಡಿಯ ಬಿಡಲಾಗದು ॥ ೩ ॥

—ಕನಕದಾಸ

—೦—

— ೫೭ —

## ಎಲ್ಲವೂ ನಿನ್ನದಯ್ಯ

(ರಾಗ—ಕೇದಾರಗೌಳ ಅಟತಾಳ)

ತನು ನಿನ್ನದು ಜೀವನ ನಿನ್ನದು ರಂಗ
ಅನುದಿನದಲಿ ಬಹೊ ಸುಖದುಃಖ ನಿನ್ನದಯ್ಯ ॥ ಪ ॥

ಸವಿನುಡಿ ವೇದ ಪುರಾಣ ಶಾಸ್ತ್ರಂಗಳು
ಕಿವಿಯಿಂದ ಕೇಳುವ ಕಥೆ ನಿನ್ನದು
ನವಮೋಹನಾಂಗೇರ ರೂಪವ ಕಣ್ಣಿಂದ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ ॥ ೧ ॥

ಒಡಗೂಡಿ ಗಂಧ ಕಸ್ತೂರಿ ಪರಿಮಳಂಗಳು
ಬಿಡದೆ ಲೇಪಿಸಿಕೊಂಬುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ ॥ ೨ ॥

ಮಾಯಾಪಾಶದ ಬಲೆಯೊಳಗೆ ಸಿಲ್ಕಿರುವಂಥ
ಕಾಯಪಂಚೇಂದ್ರಿಯಂಗಳು ನಿನ್ನವು
ಮಾಯಾರಹಿತ **ಕಾಗಿನೆಲೆಯಾದಿಕೇಶವ**
**ರಾಯ** ನೀನಲ್ಲದೆ ನರರು ಸ್ವತಂತ್ರರೆ ॥ ೩ ॥

—ಕನಕದಾಸ

—೦—

— ೫೮ —

## ಕಾಯದೇವಾಲಯದಿ ಭಾವಪುಷ್ಪದಿಂದ ಪ್ರಾಣಲಿಂಗದ ಪೂಜೆ

(ರಾಗ—ಕಲ್ಯಾಣಿ ಝಂಪೆತಾಳ)

ಎನ್ನ ಕಾಯವು ನಿನಗೆ
ಉನ್ನತಾಲಯವಾಯ್ತು ।
ಇನ್ನೆನಗೆ ಭಯವುಂಟೆ !
ಎಲೆ ಲಿಂಗವೇ ! ॥ ಪ ॥

ಎನ್ನ ಸಮತೆಯೆ ಜಲವು
ಎನ್ನ ಸದ್ಗುಣ ಗಂಧ ।
ಎನ್ನ ಸತ್ಯತ್ವವೇ ಅಕ್ಷತೆಗಳು ॥

ಎನ್ನ ಜ್ಞಾನವೆ ಪುಷ್ಪ
ಎನ್ನ ಭಕ್ತಿಯೆ ಬೋನ ।
ಎನ್ನ ಮನವೇ ನಿನಗೆ ಪೂಜಾರಿಯೊ ॥ ೧ ॥

ಇಂತಪ್ಪ ಪೂಜೆಯನು
ಸಂತಸದಿ ಕೈಕೊಳುತೆ ।
ಕಂತುಹರ **ಶಿವಷಡಕ್ಷರಿ** ಲಿಂಗವು ॥

ಮುಂತೆ ಎನ್ನೊಳಗೆ ನಿ-
ಶ್ಚಿಂತನಾಗಿರುತಿರಲು ।
ಚಿಂತೆಯುಂಟೇ ಹಲವು ಭವಭೀತಿಯಾ ॥ ೨ ॥

—ಷಡಕ್ಷರಿ

## (ಆ) ಪದ್ಯಗಳು:—

### [ ೨೮ ]
### ಮನ-ಬುದ್ಧಿ-ಕರ್ಮಗಳನ್ನು ಎನಗೆ ಅರ್ಪಿಸು

ಎನ್ನೊಳೇ ಮನವನು ನಿಲಿಸುನೀ ।
ನೆನ್ನನೇ ಜಪಿಸೆರಗು ನಿಜದಿಂ ।
ದೆನ್ನೊಳತ್ಯಾಸಕ್ತಿಯಿಂದಲೆ ಭಕ್ತ ನೀನಾಗು ॥

ಭಿನ್ನ ಭಾವವನುಳಿದು ಚಿತ್ತವ ।
ನೆನ್ನೊಳೀಪರಿ ನಿಲಿಸಿದೊಡೆ ನೀ- ।
ನನ್ನನೈದುವೆ ಸತ್ಯವಿದು ಕಲಿಪಾರ್ಥಕೇಳೆಂದ ॥ ೧ ॥

ಸರ್ವಕರ್ಮಂಗಳ ಸಮರ್ಪಿಸಿ ।
ಸರ್ವಥಾ ಕೇಳಾರು ಕೆಲಬರು ।
ಸರ್ವಭಾವನೊಳೆನ್ನೊಳೈಕಾಸಕ್ತರಾಗಿಹರು ॥

ಉರ್ವಿಯೊಳಗೇ ಕಾಗ್ರಚಿತ್ತದಿ- ।
ಸರ್ವಗತನಾದೆನ್ನ ನೆನೆಯುತ ।
ಸರ್ವದಾ ಭಜಿಸುವವರ ರಕ್ಷಿಸುವೆ ನಾನೆಂದ ॥ ೨ ॥

ಎನ್ನೊಳಿರಿಸಿದ ಮನವನುಳ್ಳ ನಿ- ।
ಜೋನ್ನತರ ಭಕ್ತರನು ಮೃತ್ಯುಭ- ।
ಯೋನ್ನತದ ಸಂಸಾರಘನಸಾಗರದ ದೆಸೆಯಿಂದ ॥

ಸನ್ನಿಹಿತವಾಗಿರ್ಪ ಸುಖದಿಂ ।
ದನ್ಯಭಾವವ ಬಿಡಿಸಿ ಕೃಪೆಯಿಂ ।
ಮನ್ನಿಸುತಲತಿವೇಗದಿಂ ದಾಂಟಿಸುವೆ ಕೇಳೆಂದ ॥ ೩ ॥

ನಿನ್ನ ಚಿತ್ತವ ನೆನ್ನೊಳರ್ಪಿಸು ।
ನಿನ್ನ ಬುದ್ಧಿಯೊಳೆನ್ನನೇ ನೆರೆ- ।
ಸನ್ನಿಹಿತವಾಗಿರಿಸುತೀವರಿ ಮಾಡುತಿರೆ ಬಳಿಕ ॥

ಅನ್ಯಭಾವವನುಳಿದುಳಿದು ನೀ- ।
ನೆನ್ನೊಳೈಕ್ಯವ ಪಡೆದು ವರಸ- ।
ಚ್ಚಿನ್ಮಯಾತ್ಮನ ಪದವನೈದುವೆ ಪಾರ್ಥಕೇಳೆಂದ ॥ ೪ ॥

ಬಿಡು ಸಕಲ ಧರ್ಮಂಗಳನು ನೀ- ।
ತಡೆಯದೆನ್ನೊಬ್ಬನನೆ ಮರೆಹೋಗು ।
ಬಿಡಿಸುವೆನು ನಾನಖಿಳಪಾತಕದಿಂದ ನಿನ್ನುವನು ॥

ಅಡಿಗಡಿಗೆ ಶೋಕವನು ಮಾಡದಿ- ।
ರೊಡೆಯನಾನಿರಲಂಜಬೇಡಂ ।
ದೊಡಬಡಿಸಿದನು ಕೃಷ್ಣರಾಯನು ಸುರಪನಂದನನ ॥ ೫ ॥

—ನಾಗರಸ
(ಕ. ಭ. ಗೀತೆ.)

## (ಇ) ವಚನಗಳು:—

### ( ೭೭ )

### ತಂದೆ ತಾಯಿ ನೀನು

ತಂದೆ ನೀನು, ತಾಯಿ ನೀನು
ಬಂಧು ನೀನು, ಬಳಗ ನೀನು
ನೀನಲ್ಲದೆ ಮತ್ತಾರು ಇಲ್ಲವಯ್ಯ !
**ಕೂಡಲಸಂಗಮದೇವ** ! ಹಾಲಿಲದ್ದು ! ನೀರಲದ್ದು ।

### ( ೭೮ )

### ನೀವೇ ಪ್ರಾಣ-ಗತಿ-ಮತಿ

ನಾ ನಿಮ್ಮ ನೆನೆವೆನು; ನೀವೆನ್ನನರಿಯಿರಿ !
ನಾ ನಿಮ್ಮನೋಲೈಸುವೆನು; ನೀವೆನ್ನ ಕಾಣಿರಿ !
ನಾ ನೆಂತು ಬದುಕುವೆನೆಂತು ಜೀವಿಸುವೆನಯ್ಯ ?
**ಕೂಡಲಸಂಗಮದೇವಾ** !
ಎನಗೆ ನೀವೇ ಪ್ರಾಣ-ಗತಿ-ಮತಿ ನೋಡಯ್ಯ !

### ( ೭೯ )

### ಎನ್ನ ದೇಹವೀಣೆಯನ್ನು ಬಾರಿಸು

ಎನ್ನ ಕಾಯುವ ದಂಡಿಗೆಯ ಮಾಡಯ್ಯ !
ಎನ್ನ ಶಿರವ ಸೋರೆಯ ಮಾಡಯ್ಯ
ಎನ್ನ ನರವ ತಂತಿಯ ಮಾಡಯ್ಯ
ಎನ್ನ ಬೆರಳ ಕಡ್ಡಿಯ ಮಾಡಯ್ಯ
ಬತ್ತೀಸ ರಾಗವ ಹಾಡಯ್ಯ
ಉದರಲೊತ್ತಿ ಬಾರಿಸು **ಕೂಡಲಸಂಗಮದೇವಾ**

## ( ೮೦ )
## ಎನ್ನ ಮನ ಸದೈವ ನಿಮ್ಮಲ್ಲಿ ಬೆರೆಯಲಿ

ನೆಚ್ಚುಗೆ ಮನ ನಿಮ್ಮಲ್ಲಿ; ಮೆಚ್ಚುಗೆ ಮನ ನಿಮ್ಮಲ್ಲಿ.
ಸಲಹುಗೆ ಮನ ನಿಮ್ಮಲ್ಲಿ.
ಅಳಲುಗೆ ಮನ ನಿಮ್ಮಲ್ಲಿ; ಬಳಲುಗೆ ಮನ ನಿಮ್ಮಲ್ಲಿ.
ಕರಗಂಗೆ ಮನ ನಿಮ್ಮಲ್ಲಿ; ಕೊರಗಂಗೆ ಮನ ನಿಮ್ಮಲ್ಲಿ.
ಎನ್ನ ಪಂಚೇಂದ್ರಿಯಗಳು, ಕರ್ಪೂರ ಉಂಡ ಉರಿಯಂತೆ,
ನಿಮ್ಮಲ್ಲಿ ಬೆರಸುಗೆ **ಚೆನ್ನಮಲ್ಲಿಕಾರ್ಜುನಾ.**

## ( ೮೧ )
## ನಿಮ್ಮಿಂದ ನಿಮ್ಮನು ನೆನೆವೆ

ನೆನೆಸುವೆ; ಮರೆಸುವೆ.
ಎನ್ನ ಗುಣ—ದೋಷ ನಿಮ್ಮದು.
ಕೇಳಯ್ಯ ಎನ್ನ ಬಿನ್ನಪವ!
ನಿಮ್ಮ ನೆನೆವ ನಾನಲ್ಲ ಕಂಡಯ್ಯ.
ನಿಮ್ಮಿಂದ ನಿಮ್ಮನೆ ನೆನೆವೆನು.
ಕೃಪೆಮಾಡು **ಕಪಿಲ ಸಿದ್ಧಮಲ್ಲಿಕಾರ್ಜುನಾ.**

## ( ೮೨ )
## ನೀವು ಆಡಿಸಿದಂತೆ ಆಡುವೆ

ದರ್ಪಣದೊಳಗಣ ರೂಪಿಗೆ ಚೇಷ್ಟೇ—ಭಾವವುಂಟೆಂದಡೆ,
ನೋಡುವಾತನ ಚೇತನದಿಂದಲ್ಲದೆ,
ಬೇರೆ ಚೇತನವುಂಟೇನಯ್ಯಾ?
ಎನ್ನ ಕರಣೇಂದ್ರಿಯಂಗಳು ಚೇಷ್ಟಿಸಿದವೆಂದಡೆ,
ನಿಮ್ಮ ಚೇತನದಿಂದಲ್ಲದೆ, ಬೇರೆ ಅದಕ್ಕೆ ಚೇತನವುಂಟೇನಯ್ಯ?
ಸೂತ್ರದ ಬೊಂಬೆಯಂತೆ ನೀವಾಡಿಸಿದಡೆ,
ನಾನಾಡುತ್ತಿರ್ದೆನಯ್ಯ **ಅಖಂಡೇಶ್ವರಾ.**

( ೮೩ )

## ನಿಮ್ಮ ಕಡಲಲ್ಲಿಯಬೊಬ್ಬುರೆ ನಾನು

ಒಡಲುಗೊಂಡೆನಾಗಿ ಮೃಡ, ನಿಮಗೆ ಹಗೆಯಾದೆನಯ್ಯ!
ಆನು ಒಡಲುಗೊಂಡರೇನು?
ಕಡಲೊಳಗಣ ಬೊಬ್ಬುಳಿಕೆ, ಕಡಲೊಳಗೆ ಅಳಿವಂತೆ,
ಎನ್ನೊಡಲು ಅಳಿದು ಹೋದರೇನು?
ಪ್ರಾಣ ನಿಮ್ಮ ಎಡೆಯಲಡಗುವದಯ್ಯ!
**ರಾಮನಾಥ !**

( ೮೪ )

## ಎನ್ನ ಸರ್ವಸ್ವ ನೀನೆಯೆಯ್ಯ !

ಎನ್ನಂತರಂಗ ನೀವಯ್ಯ, ಎನ್ನ ಬಹಿರಂಗ ನೀವಯ್ಯ.
ಎನ್ನರಿವು ನೀವಯ್ಯ, ಎನ್ನ ಮರಹು ನೀವಯ್ಯ.
ಎನ್ನ ಭಕ್ತಿ ನಿವಯ್ಯ, ಎನ್ನ ಯುಕ್ತಿ ನೀವಯ್ಯ.
ಎನ್ನ ಆಲಸ್ಯ ನೀವಯ್ಯ, ಎನ್ನ ಪರವಶ ನೀವಯ್ಯ,
ಸಮುದ್ರವ ಹೊಕ್ಕ ಕಾಲು ಬಳದಲ್ಲಿ
ಕೊರತೆಯನರಸುವದೆ ಆ ಸಮುದ್ರವು?
ಎನ್ನ ಲೇಸು ಹೊಲ್ಲೆಂಬುದ ನೀವೆ ಬಲ್ಲಿರಿ.
ಇದಕ್ಕೆ ನಿಮ್ಮ ಪಾದವೇ ಸಾಕ್ಷಿ, ಎನ್ನ ಮನವೇ ಸಾಕ್ಷಿ
**ಕೂಡಲಸಂಗಮದೇವಾ**

# ಮಕರಂದ

ಹಿರಣ್ಮಯೇ ಪರೇ ಕೋಶೇ
ವಿರಜಂ ಬ್ರಹ್ಮ ನಿಷ್ಕಲಂ ।
ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಃ
ತದ್ಯದಾತ್ಮವಿದೋ ವಿದುಃ ॥ ೧ ॥

—ಮುಂಡಕ

ನೀಹಾರಧೂಮಾರ್ಕಾನಲಾನಿಲಾನಾಂ
ಖದ್ಯೋತ ವಿದ್ಯುತ ಸ್ಫಟಿಕ ಶಶಿನಾಂ ।
ಏತಾನಿ ರೂಪಾಣಿ ಪುರಸ್ಸರಾಣಿ
ಬ್ರಹ್ಮಣ್ಯಭಿವ್ಯಕ್ತಿಕರಾಣಿ ಯೋಗೇ ॥ ೨ ॥

—ಶ್ವೇತಾಶ್ವತರ

ಅಣೋರಣೀಯಾನ್ ಮಹತೋ ಮಹೀಯಾನ್ ।
ಆತ್ಮಾಸ್ಯ ಜಂತೋರ್ನಿಹಿತಂ ಗುಹಾಯಾಂ ॥ ೩ ॥

—ಕಠ

ಬ್ರಹ್ಮೈವೇದಮಮೃತಂ ಪುರಸ್ತಾತ್
ಬ್ರಹ್ಮ ಪಶ್ಚಾದ್ಬ್ರಹ್ಮ ದಕ್ಷಿಣತಶ್ಚೋತ್ತರೇಣ ॥
ಅಧಶ್ಚೋರ್ಧ್ವಂ ಪ್ರಸೃತಂ ಬ್ರಹ್ಮೈವೇದಂ
ವಿಶ್ವಮಿದಂ ವರಿಷ್ಠಮ್ ॥ ೪ ॥

—ಮುಂಡಕ

ಸರ್ವಭೂತಸ್ಥಮಾತ್ಮಾನಂ–
ಸರ್ವಭೂತಾನಿ ಚಾತ್ಮನಿ ।
ದೃಕ್ಷತೇ ಯೋಗಯುಕ್ತಾತ್ಮಾ
ಸರ್ವತ್ರ ಸಮದರ್ಶನಃ ॥ ೫ ॥

—ಶ್ರೀ ಗೀತಾ

—೬೦—

## ಎಲ್ಲೆಲ್ಲಿಯೂ ಜ್ಯೋತಿರ್ಲಿಂಗದರ್ಶನ

(ರಾಗ—ದುರ್ಗಾ ತ್ರಿತಾಳ)

ಸಾರಿ ಚಲ್ಲೀದ ಮುಕುತಿ । ಗುರು ।
ತೋರಿಸದಲ್ಲದೆ ಕಾಣಿಸದಣ್ಣಾ ॥ ಪ ।

ವೇದದ ಮೊದಲಿನ ಮೂಲವದು ।
ಮೇದಿನಿಯೊಳು ತಾ ತುಂಬಿಹುದು ॥
ಹಾದಿ ಹಾದಿಗೆ ಬಿದ್ದಿಹುದು । ಇದು ।
ಸಾಧಕಜನರಿಗೆ ಕಾಣುವದಣ್ಣಾ ॥ ೧ ॥

ಎತ್ತ ನೋಡೆ ಪರಬ್ರಹವಿದು ।
ಸುತ್ತುಮುತ್ತಲು ಸುಳಿಯುವದು ॥
ಮತ್ತೆ ಮತ್ತೆ ಅದು ಕಾಂಬುವದು । ಗುರು ।
ಪುತ್ರರಿಗಲ್ಲದೆ ಕಾಣಿಸದಣ್ಣಾ ॥ ೨ ॥

ಹಿಂದೆ ನೋಡಲು ಬಂದಿಹುದು ।
ಮುಂದೆ ನೋಡಲು ನಿಂದಿಹುದು ॥
ಸಂದಿಸಂದಿಗೆ ಜಡಿದಿಹುದು । ಆ- ।
ನಂದ **ಗುಹೇಶ್ವರ** ಲಿಂಗವದಣ್ಣ ॥ ೩ ॥

—ಪ್ರಭುದೇವ

---

—೬೧—

## ಚಿದ್ರತ್ನವನ್ನು ನೋಡಿರಿ

(ರಾಗ—ಕಲ್ಯಾಣಿ; ಅಟತಾಳ)

ರತ್ನ ಬಂದಿದೆ ನೋಡಿರೋ । ಉನ್ನತಜೀವ ॥ ಪ ॥
ಪ್ರಧ್ವಿಗಧಿಕ ಬ್ರಹ್ಮಪುರದಿಂದ ಬಂದಿದೆ ।
ರತ್ನಪರೀಕ್ಷೆಯ ಬಲ್ಲ ಸತ್ಪುಷರು ॥ ಅ ॥

ಶಿರದೊಳು ಅಡಗಿಯಿದೆ । ಯಾವಾಗಲು ।
ಕರದಲ್ಲಿ ಕಾಣುತ್ತಿದೆ ।
ವರಚಂದ್ರಸೂರ್ಯ ಬೀದಿಗಳೊಳಗಿಟ್ಟದೆ ।
ದುರಿತ ಕರ್ಮಗಳಳಿದವಗೆ ಕಾಣುತಲಿದೆ ॥ ೧ ॥

ಅಷ್ಟದಳಗಳಿಂದಾ । ಆ ರತ್ನವು ।
ದಿಟ್ಟವಾಗಿಹುದರಿಂದಾ ।
ದೃಷ್ಟಿಯನಗಲದೆ ನೋಡಿದ ಪುರುಷನು ।
ನಷ್ಟವಾತಕನಾಗಿ ಶ್ರೇಷ್ಠನಾಗುವನಂತೆ ॥ ೨ ॥

ಕಳ್ಳರ ಭಯವಿಲ್ಲವು । ಈ ರತ್ನಕ್ಕೆ ।
ಸುಳ್ಳರ ಸುಳುಹಿಲ್ಲವು ।
ಎಲ್ಲೆಲ್ಲಿ ನೋಡಲಲ್ಲಲ್ಲೆ ಕಾಂಬುದು ತಾನು ।
ಒಲ್ಲೆನೆಂದರು ಬಿಡದೆದುರಿಗೆ ನಿಲ್ಪುದು ॥ ೩ ॥

ಶಿರದೊಳು ರತ್ನವನ್ನು । ಧರಿಸಿದಂಥ ।
ಉರಗನ ಹೃದಯದಲ್ಲಿ ।
ಉರಗಭೂಷಣ, ಪಕ್ಷಿಹಂಸವಾಹನ ಮುಖ್ಯ ।
ಸುರಮುನಿ ಹೃದಯದಿ ನಿತ್ಯ ಬೆಳಗುವಂಥ । ॥ ೪ ॥

ದೊರೆ ದೇಸಾಯಿಗಳಲ್ಲಿಯು । ನವಕೋಟಿಯ ।
ವರನಾರಾಯಣನಲ್ಲಿಯು ।
ನೆರೆ ಚಕ್ರವರ್ತಿ ಬೊಕ್ಕಸದೊಳಗಿಲ್ಲ ಶ್ರೀ- ।
**ಗುರುಮಹಾಲಿಂಗ**ನ ಭಂಡಾರದೊಳಿಹ ॥ ೫ ॥

—ಶಂಕರಾನಂದ

— ೦ —

— ೬೨ —

## ದಿವ್ಯ ಪರಬಿಂದು

(ರಾಗ—ಮಾಂಡ ದೀಪಚಂದಿ)

ಕಾಣುತಿದೆ ಪರಬಿಂದು ॥ ಪ ॥

ಶಾಂಭವಿಯ ಕೊನೆಯಲ್ಲಿ ।
ಲಕ್ಷವಿಡಲಾಕ್ಷಣದಿ ॥ ಅ ॥

ಸ್ಥಿರಕಾಯನಾಗಿ ಕುಳಿತು । ವ್ಯವ- ।
ಹರಿಪ ಕರಣೇಂದ್ರಿಯಗಳನು ತಡೆದು
ಬಾಹ್ಯ ಪರಿಕರವನಳಿದು । ದೃಷ್ಟಿ ।
ಮನವವನ ಬೆರಸಿ ನಾಸಾಗ್ರದಲಿ ನೋಡೆ ॥ ೧ ॥

ಎಳೆಯಾದ ಮುತ್ತಿನಂತೆ । ದೀವ- ।
ದುರಿಯಂತೆ ನೆಳೆಮಿಂಚಿನಂತೆ ರತ್ನದಂತೆ ।
ತೊಳಿವ ವಿದ್ರುಮ ಬಳ್ಳಿಯಂತೆ । ಥಳ- ।
ಥಳಿಪ ಶಶಿಸೂರ್ಯಕೋಟಿಪ್ರಭೆಯಂತೆ ॥ ೨ ॥

ಒಳಗಿರ್ಪ ಪ್ರಾಣಲಿಂಗಾ । ಅದು ।
ಪಳಕಿನ ಕೊಡದಲಿಹ ದೀಪತೆರದಿ ।
ಹೊಳೆವ ನೇತ್ರದ್ವಾರದಿ । ಅದು ।
ಬೆಳಗಿ ಹೊರಹೊಮ್ಮಿ **ಗುರುಸಿದ್ಧ** ತಾನೆಯಾಗಿ ॥ ೩ ॥

—ಸರ್ಪಭೂಷಣ

— ೦ —

— ೬೩ —

## ತೇಜಃಪುಂಜ ವಸ್ತು

(ರಾಗ—ಲಾವಣಿ)

ವಸ್ತು ಕಂಡೆನೊ ಒಂದು ।
ಕರ್ತೃ ಸದ್ಗುರುವಿನ ಕೃಪೆಯಿಂದ ॥ ಪ ॥

ತೇಜಃಪುಂಜಿದರ ರೂಪಾ ।
ಮೂಜಗದೊಳಗಿದು ಅಪರೂಪಾ ॥
ನಿಜವಾಗಿ ನಿರ್ವಿಕಲ್ಪಾ ।
ಸುಜನರ ಹೃದಯದಿ ಚಿದ್ಘನದೀಪಾ ॥ ೧ ॥

ರೂಪಕ್ಕೆ ನೆಲೆಯಿಲ್ಲ ।
ವ್ಯಾಪಿಸಿಕೊಂಡಿಹುದು ಮೂಜಗವೆಲ್ಲ ॥
ಗುಪ್ತ ಜ್ಞಾನಿಯು ಬಲ್ಲಾ ।
ಜಪತಪಕೆ ಇದು ನಿಲುಕುವದಿಲ್ಲಾ ॥ ೨ ॥

ಬಯಲಿಗೆ ನೀರ ಬಯಲಾ ।
ಭಾವಿಕ ಬಲ್ಲನೊ ಇದರಲ್ಲಿ ಹೊಯಿಲಾ ॥
**ಮಹಿಪತಿಗೆ** ಅನುಕೂಲಾ ।
ಜೀವನ್ಮುಕ್ತರಿಗಿದುವೇ ಮೂಲಾ ॥ ೪ ॥

—ಮಹಿಪತಿ

—೦—

— ೬೪ —

## ಅನಾಹತನಾದಶ್ರವಣ

( ರಾಗ— ಕಾನಡಾ ತ್ರಿತಾಳ )

ನಾದವ ಕೇಳುತ ನಿದ್ರೆಯ ಮಾಡುತ
ಬ್ರಹ್ಮವು ತಾನಾಗಿ ।
ನಾದವ ಕೇಳಲು ನಾನಾಗುಣಗಳು-
ಹೋದವು ತಾವಾಗಿ ॥ ಪ ॥

ಕೂಡಿತು ದೃಷ್ಟಿ ಪರಬ್ರಹ್ಮದಿ ತಾ
ಅನುದಿನದಲಿ ಬ್ಯಾಗಿ ।
ಮನ ಇಂದ್ರಿಯಗಳು ಹುಡುಕಿದರಿಲ್ಲ-
ಹೋದವು ತಾವಾಗಿ ॥ ೧ ॥

ನಾನಾ ವರ್ಣದ ಛಾಯವ ನೋಡುತ
ನಿದ್ರೆಯ ಮಾಡಿದೆನೋ ।
ಭಾನುಕೋಟಿ ಪ್ರಕಾಶದ ಬೆಳಕಲಿ
ನಾದವ ಕೇಳಿದೆನೋ ॥ ೨ ॥

ಕಾಣದ ರೂಪವ ಕಾಣುತಲೆ ನಾ
ಕಾಮಿಸಿ ಮಲಗಿದೆನೋ ।
ಬೋಧ **ಚಿದಾನಂದ** ಸದ್ಗುರುರಾಯನ
ಧ್ಯಾನವ ಮಾಡಿದೆನೋ ॥ ೩ ॥

—ಚಿದಾನಂದ

—o—

— ೬೫ —

## ಪರಂಜ್ಯೋತಿಯ ಬೆಳಕು

(ರಾಗ— ನಾದನಾಮಕ್ರಿಯೆ ಅಟತಾಳ)

ಜ್ಯೋತಿ ಬೆಳಗುತಿದೆ । ವಿಮಲ ಪರಂ- ।
ಜ್ಯೋತಿ ಬೆಳಗುತಿದೆ ॥ ಪ ॥

ಮಾತುಮನಂಗಳಿಂದತ್ತತ್ತದ ಮೀರಿದ ।
ಸಾತಿಶಯದ ನಿರುಪಾಧಿಕ ನಿರ್ಮಲ ॥ ಅ ॥

ಶಿವಧರ್ಮನಾಳವೆಂತೆಂಬ ಕಂಬದ ಮೇಲೆ ।
ಸುವಿವೇಕ-ಹೃದಯಾಬ್ಜ ಪಣತಿಯೊಳು ॥
ಸವಿಯದ ಸದ್ಭಕ್ತಿರಸ-ತೈಲ ತುಂಬಿದ ।
ಪ್ರವಿಮಲ-ಕಳೆಯೆಂಬ ಬತ್ತಿವಿಡಿದು ದಿವ್ಯ- ॥ ೧ ॥

ಮುಸುಕಿದ ವಿಷಯ ಪತಂಗ ಬಿದ್ದುರುಳೆ ತಾ- ।
ಮನಬುದ್ಧಿಯೆಂಬ ಕತ್ತಲೆಯಳಿಯೆ ॥
ಮಸಗಿ ಸುಜ್ಞಾನವೆಂತೆಂಬ ಮಹಾಪ್ರಭೆ ।
ಪಸರಿಸಿ ಮಾಯಾಕಾಳಿಕೆ ಪೊರ್ದದನುಪಮ ॥ ೨ ॥

ಪ್ರಣವಾಗಾರದ ಗುಣಮೂರು ಮುಟ್ಟದ ।
ಗಣನೆಗತೀತಾರ್ಥವನೆ ತೋರುವ ॥
ಅಣುಮಾತ್ರ ಚಲನೆಯಿಲ್ಲದ ಮೋಕ್ಷಚಿಂತಾ- ।
ಮಣಿಯೆನಿಸುವ **ಶಂಭುಲಿಂಗವೆ** ತಾನಾದ ॥ ೪ ॥

—ನಿಜಗುಣಿ

—೦—

— ೬೬ —

## ಸೂರ್ಯನಿಲ್ಲದ ಪ್ರಭೆ; ಚಂದ್ರನಿಲ್ಲದ ಬೆಳದಿಂಗಳು

( ರಾಗ— ಶಂಕರಾಭರಣ ದಾದರಾ)

ಅರ್ಥಿಯಾಗಿದೆ ಬನ್ನಿ ।
ಅರ್ತುನೋಡುವ ಗುರುಮೂರ್ತಿಯಿಂದ ।
ನಿರ್ತವಾಗಿ ಪೂರ್ಣ ।
ಬೆರ್ತುನೋಡುವ ಬನ್ನಿ ! ಗುರ್ತದಿಂದ ॥ ಪ ॥

ಸೂರ್ಯನಿಲ್ಲದೆ ಸು-
ಪ್ರಕಾಶ ತುಂಬಿದೆ ಹೇಳಲೇನಾ ?
ತುರ್ಯಾವಸ್ಥೆಯಲ್ಲಿ-
ಬೆರ್ತುಕೂಡುವ ಜ್ಞಾನಿ, ಬಲ್ಲ ಖೂನಾ ॥ ೧ ॥

ಚಂದ್ರನಿಲ್ಲದೆ ಬೆಳ-
ದಿಂಗಳ ಬಿದ್ದಿದೆ ಬಲುಭಾಳಾ ।
ಇಂದ್ರಿಯಾದಿಗಳೆಲ್ಲ-
ಹರುಷಾಗಿ ನೋಡುವವು ಸರ್ವಕಾಲಾ ॥ ೨ ॥

ಸುಂದ್ರವಾದ ಸು-
ವಸ್ತುವೊಂದೊಳಗದ ಬಲು ಮೇಲಾ ।
ಸಾಂದ್ರವಾದ ಸುಖಾ
ತುಂಬಿ ತುಳಕತದ, ಥಳಥಳಾ ॥ ೩ ॥

ಮನದ ಕೊನೆಯಲಿದ್ದ,
ಘನಸುಖ ನೋಡಿರಿ, ನೆನೆದು ಬೇಗಾ ।
ಅನುಭವಿಗಳಿಗಿದು,
ಅನುಕೂಲವಾದಿತು, ಬ್ರಹ್ಮಭೋಗಾ ॥ ೪ ॥

ನಾನೀನೆಂಬುವ ಮಾತು,
ಏನು ತಾಳುವದಲ್ಲ, ರಾಜಯೋಗ ।
ಅನುದಿನ **ಮಹಿಪತಿ**
ತಾನೆ ತಾನಾದನು ಸದ್ಗುರುವೀನಾ ॥ ೫ ॥

—ಮಹಿಪತಿ

—೦—

— ೬೭ —

## ಕಣ್ಣಿನಲ್ಲಿಯು ಕೈವಲ್ಯವ ಬಣ್ಣಿಸಬಾರದು

( ರಾಗ— ಶಂಕರಾಭರಣ ದಾದರಾ )

ಕಣ್ಣಿನೊಳಗೆ ನೋಡು- ।
ಕೈವಲ್ಯವ ನೀನು ಕಣ್ಣುತುಂಬಿ ॥
ಬಣ್ಣಿಸಲಳವಲ್ಲ ।
ಸದ್ಗುರು ಚರಣವ ನಿಜ ನಂಬಿ ॥ ಪ ॥

ಕತ್ತಲ ಮನೆಯೊಳು ।
ರತ್ನದ ಮಣಿಯದೆ ಕಂಡುಕೊಳ್ಳಿ ॥
ಚಿತ್ತದ ಕೊನೆಮೇಲೆ ।
ಶ್ರೀಹರಿ ನಿಂತಾನ ಕಂಡುಕೊಳ್ಳಿ ॥ ೧ ॥

ಒಳಹೊರಗ ಒಂದಾಗಿ ।
ಹೊಳೆಯುತಲಿರುವುದು ನಮನಮಾಡಿ ॥
ಥಳಗ್ಗಳಿಸುವ ಸೂ- ।
ವರ್ಣದ ಜ್ಯೋತಿಯ ತಾರಕನೋಡಿ ॥ ೨ ॥

ಉನ್ಮನಿಯೊಳಗಿದ್ದ ।
ಓಂಕಾರನಾದವ ಕೇಳಿರಯ್ಯಾ ॥
ಸನ್ಮಾನದಿಂದಲಿ ।
ಸಾಧುಸಂತರ ಬಲಗೊಂಬಿರಯ್ಯ ॥ ೩ ॥

ಕಾಯವು ಸ್ಥಿರವಿಲ್ಲ ।
ಮಾಯದ ಸಂಸಾರ ಅಳಿಯಬೇಕು ॥
ಕಾಯವು ಇರಲಿಕ್ಕೆ ।
ಕಮಲನಾಭನಕೂಡ ಬೆರೆಯಬೇಕು ॥ ೪ ॥

ಜ್ಞಾನಿಯಾದಮೇಲೆ ।
ತಾನೇತಾನಾದದ್ದು ತಿಳಿಯಬೇಕು ॥
ಸುಜ್ಞಾನಿ **ಪುರಂದರ** ।
**ವಿಠಲ**ರಾಯನಕೂಡ ಬೆರೆಯಬೇಕು ॥ ೫ ॥

—ಪುರಂದರದಾಸ

—೦—

— ೬೮ —

## ಅಂತರಂಗದಲ್ಲಿ ಭಗವಂತನನ್ನು ಕಂಡೆ

(ರಾಗ— ಕಾಂಬೋದಿ ಝಂಪೆತಾಳ)

ಅಂತರಂಗದ ಕದವು ತೆರೆಯಿತಿಂದು ।
ಇಂತು ಪುಣ್ಯದ ಫಲದ ಪ್ರಾಪ್ತಿಯಾಯಿತು ಎನಗೆ ॥ ಪ ॥

ಏಸುದಿನವಾಯಿತೊ ! ಬೀಗಮುದ್ರೆಯ ಮಾಡಿ ।
ವಾಸವಾಗಿದ್ದರೈ ದುರುಳರಲ್ಲಿ ॥
ಮೋಸವಾಯಿತು ಇಂತು ಬರಿದೆ ಇಂದಿನತನಕ ।
ಸೂಸಿರ್ದ ತಮಸಿನಿಂ ಕಾಣುತಿದ್ದಿಲ್ಲ ॥ ೧ ॥

ಹರಿಕರುಣವೆಂಬುವಾ ಕೀಲಿಕೈ ದೊರೆಯಿತು ।
ಗುರುಕರುಣವೆಂಬಂಥ ಶಕ್ತಿಯಿಂದ ॥
ವರ ಭಾಗವತರ ಸಹವಾಸವನು ನಾಮಾಡಿ ।
ಹರಿಭಜನೆಯಿಂದಲೇ ಬೀಗವನು ತೆಗೆದೇ ॥ ೨ ॥

ಸುತ್ತಲಿದ್ದವರೆಲ್ಲ ಎತ್ತಲೋ ಓಡಿದರು ।
ತತ್ವಚಿಂತನೆಯೆಂಬ ದೀಪವನ್ನೂ ॥
ಜತ್ತಾಗಿ ಹಿಡಕೊಂಡು ದ್ವಾರವನು ಪೋಗಲು ।
ಎತ್ತ ನೋಡಿದತ್ತ ಶೃಂಗಾರ ಸದನಾ ॥ ೩ ॥

ಹೊರಗೆ ದ್ವಾರವು ನಾಲ್ಕು ಒಳಗೈದು ದ್ವಾರಗಳು ।
ಒಳದಾರಿಯಲ್ಲಿ ಪ್ರಾಣಾದಿಪ್ರಿಯರು ॥
ಮಿರುಗುವಾ ಮಧ್ಯಮಂಟಪ ಕೋಟಿರವಿಯಂತೆ ।
ಸರಸಿಜಾತನಪಿತನ ಅರಮನೆಯ ಸೊಬಗು ॥ ೪ ॥

ಸ್ವಮೂರ್ತಿಗಣ ಮಧ್ಯ ಸಚ್ಚಿದಾನಂದೈಕ ।
ರಮೆಯೊಡನೆ ನಗೆಮೊಗದಿ ಮಿನುಗುತಿರುವ ॥
ಕಮಲಜಾದಿಗಳಿಂದೆ ಸ್ತುತಿಸಿಕೊಳುತಿಹ ಹೃದಯ- ।
ಕಮಲದೊಳಗಿಹ **ವಿಜಯ ವಿಠಲನನು** ಕಂಡೆ ॥ ೫ ॥

—ವಿಜಯದಾಸ

— o —

— ೬೯ —

## ವೈಕುಂಠ ದರ್ಶನ

(ರಾಗ—ಆನಂದಭೈರವಿ ಅಟತಾಳ)

ಇಷ್ಟು ದಿನ ಈ ವೈಕುಂಠ ।
ಎಷ್ಟು ದೊರವೆನ್ನುತಿದ್ದೆ ॥
ದೃಷ್ಟಿಯಿಂದ ನೋಡಿಕೊಂಡೆ
ಸೃಷ್ಟಿಗೀಶ ಶ್ರೀರಂಗಶಾಯಿ ॥ ಪ ॥

ವನ ಉಪವನಗಳಿಂದ ।
ಘನಸರೋವರಗಳಿಂದ ॥
ಕನಕ ಗೋಪುರಗಳಿಂದ ।
ಘನಶೋಭಿತನೆ ಶ್ರೀರಂಗಶಾಯಿ ॥ ೧ ॥

ಎಂಟು ಏಳು ಕಳೆದದ್ದರಿಂದ ।
ತುಂಟರೈವರ ತುಳಿದದ್ದರಿಂದ ॥
ಕಂಟಕನೊಬ್ಬನ ಕಳೆದದ್ದರಿಂದ ।
ಬಂಟನಾಗಿ ಬಂದೆ ಶ್ರೀರಂಗಶಾಯಿ ॥ ೨ ॥

ವಜ್ರವೈಡೂರ್ಯ ತೋಲೆಗಳ ಕಂಡೆ ।
ಪ್ರಜ್ವಲಿಪ ಮಹಾದ್ವಾರವ ಕಂಡೆ ॥
ನಿರ್ಜರೋತ್ತಮರ ಮನೆಗಳ ಕಂಡೆ ।
ದುರ್ಜನಾಂತಕ ಶ್ರೀರಂಗಶಾಯಿ ॥ ೩ ॥

ರಂಭೆ ಊರ್ವಶಿ ಮೇಳವ ಕಂಡೆ ।
ತುಂಬರ ನಾರದರ ಕಂಡೆ ॥
ಅಂಬುಜೋದ್ಭವ ಪ್ರಮುಖರ ಕಂಡೆ ।
ಶಂಬರಾಂತಕಪಿತ ಶ್ರೀರಂಗಶಾಯಿ ॥ ೪ ॥

ನಾಗಶಯನನ ಮೂರ್ತಿಯ ಕಂಡೆ ।
ಭೋಗಿಭೂಷಣ ಶಿವನ ಕಂಡೆ ॥
ಭಾಗವತರ ಸಮ್ಮೇಳವ ಕಂಡೆ ।
**ಕಾಗಿನೆಲೆಯಾದಿ** ಶ್ರೀರಂಗಶಾಯಿ ॥ ೫ ॥

—ಕನಕದಾಸ

—೦—

— ೭೦ —

## ಏನೆಂದು ಹೇಳಲಿ ಆನಂದ ಸಂಭ್ರಮ

(ರಾಗ—ಭೈರವಿ ಅಟತಾಳ)

ಹರಿದಾಸರ ಸಂಗ ದೊರಕಿತು ಎನಗೀಗ । ಇನ್ನೇನಿನ್ನೇನು ।
ವರಗುರು ಉಪದೇಶ ನೆರವಾಯ್ತು ಎನಗೀಗ । ಇನ್ನೇನಿನ್ನೇನು ॥ ಪ ॥

ಮಾಯದ ಸಂಸಾರ ಮಮಕಾರ ತಗ್ಗಿತು । ಇನ್ನೇನಿನ್ನೇನು ।
ತೋಯಜಾಕ್ಷನ ಧ್ಯಾನ ಹೃದಯದೊಳ್ನೆಲಿಸಿತು । ಇನ್ನೇನಿನ್ನೇನು ॥ ೧ ॥

ಹಲವು ದೈವಗಳೆಂಬ ಹಂಬಲ ಬಿಡಿಸಿತು । ಇನ್ನೇನಿನ್ನೇನು ।
ಜಲಜನಾಭನ ನಾಮ ಜಿಹ್ವೆಯೊಳ್ನೆಲಸಿತು । ಇನ್ನೇನಿನ್ನೇನು ॥ ೨ ॥

ತಂದೆ ತಾಯಿ ಮುಚುಕುಂದ ವರದನಾದ । ಇನ್ನೇನಿನ್ನೇನು ।
ಸಂದೇಹವಿಲ್ಲ ಮುಕುಂದ ದಯಮಾಡಿದ । ಇನ್ನೇನಿನ್ನೇನು ॥ ೩ ॥

ಏನೆಂದು ಹೇಳಲಿ ಆನಂದ ಸಂಭ್ರಮ । ಇನ್ನೇನಿನ್ನೇನು ।
ಆನಂದಕಂದನ ಒಲುಮೆಯುಗಳಿಸಿದೆ । ಇನ್ನೇನಿನ್ನೇನು ॥ ೪ ॥

ಎನ್ನ ವಂಶಗಳೆಲ್ಲ ಪಾವನವಾದವು । ಇನ್ನೇನಿನ್ನೇನು ।
ಚಿನ್ಮಯ **ಪುರಂದರ ವಿಠಲಯ್ಯ** ದೊರಕಿದ । ಇನ್ನೇನಿನ್ನೇನು ॥ ೫ ॥

—ಪುರಂದರದಾಸ

## ( ಆ ) ಪದ್ಯಗಳು:—

### [ ೭೯ ]
### ಚಿದ್ರೂಪ ದರ್ಶನ

ಆರು ಬಲ್ಲರು ಹಂಸತತ್ವವ ತಮ್ಮ ಶ- ।
ರೀರ ತುಂಬಿರುತಿಹುದದನು ॥
ಹಾರದೆ ಸಾರದೆ ಹೊರಹೊರಗಾಡಿ ನಂ ।
ಸಾರದುಃಖವನುಣ್ಣುತಿಹರು ॥ ೧ ॥

ಹೊಳೆವ ಕನ್ನಡಿ ಕೈಯೊಳಿರ್ದು ನೋಡದೆ ನೀರ ।
ನೆಳಲಲ್ಲಿ ಮೊಗವ ನೋಳ್ಪಂತೆ ॥
ಒಳಗಿದ್ದ ಚಿದ್ರೂಪ ನೋಡದೆ ಜಗವೆಲ್ಲ ।
ಬಳಲುತಿಹುದು ಹೋರಾಡಿ ॥ ೨ ॥

ತಿಳಿವೆ ಶರೀರ ತಿಳಿವೆ ರೂವು ಬೆಳಗೆ ಮೈ ।
ಬೆಳಗೆ ತಾನಾಗಿರುತಿಹುದು ॥
ತಿಳಿವು ಬೆಳಗುಗಳ ಹಂಸನ ಕುರುಹೆಂದು ।
ತಿಳಿದು ನೋಳ್ಪವನೀಗ ಧನ್ಯಾ ॥ ೩ ॥

ಪುರುಷಾಕಾರನು ಮೈಯೊಳಿರ್ದುದ ಮೈಯ ।
ಬೆರಸದೆ ಶುದ್ಧಾತ್ಮನಿಹನು ॥
ಪುರುಷಾಕಾರವನಾಕಾಶದೊಳಗೊಂದ- ।
ಬರೆದರೋ ಎಂಬ ಭಾವದೊಳು ॥ ೪ ॥

ಸುರುಚಿರ ಛಾಯಾ ಪ್ರತಿಮೆಗೆ ಛಾಯಾ ।
ಪುರುಷಗೆ ಸದೃಶನನೆಂದು ॥
ಸ್ಮರಿಸುತ ಕಣ್ಮುಚ್ಚಿ ನೋಡಿದರವರಂತೆ ।
ಪರಮಾತ್ಮ ತೋರುವನೊಳಗೆ ॥ ೫ ॥

ಎಳೆಮಿಂಚಿನಂದದ ಬೊಂಬೆಯೊ ತಿಂಗಳ ।
ತಿಳಿವೆಳಗಿನೊಳಾದ ರೂಪೋ ॥
ಪಳಕಿನ ಪುತ್ತಳಿಯೋ ಯನಕ್ರಮದಿಂದ ।
ಹೊಳೆವುದೊಳಗೆ ತನ್ನ ರೂಪು ॥ ೬ ॥

ಜ್ಯೋತಿರ್ಲೋಕವ ಹೊಕ್ಕಂತೆ ತಂಪಿನ ।
ಜ್ಯೋತಿಯ ನಡುವೆ ನಿಂದಂತೆ ॥
ತಾ ತನ್ನ ನಿಜವನೋಳ್ಪಾಗಳೀವುದು ತನು ।
ವಾತದೊಳಿಹ ಸಿದ್ಧರಂತೆ ॥ ೭ ॥

ನುಡಿಯಿಲ್ಲ ನಡೆಯಿಲ್ಲ ತನುವಿಲ್ಲ ಮನವಿಲ್ಲ ।
ಕಡೆಗೆ ವಂಚೇಂದ್ರಿಯವಿಲ್ಲ ॥
ಕಡುಸುಖ ಸುಜ್ಞಾನಕಾಂತಿಯೆ ರೂವಾಗಿ ।
ವೊಡಲು ತುಂಬಿಹುದಾತ್ಮರೂವು ॥ ೮ ॥

ತನ್ನ ತಾನೋಳ್ಪಾಗ ನೋಡು ಚಿತ್ರವಕರ್ಮ ।
ತನ್ನ ತಾ ಜರಿದೋಡುತಿಹುದು ॥
ಮುನ್ನಂದು ಕಂಡು ಕೇಳಿದ ತೆರನಲ್ಲದೊಂ ।
ದುನ್ನತ ಸುಖ ಹುಟ್ಟುತಿಹುದು ॥ ೯ ॥

ಜುಮ್ಮೆನ್ನುತಿಹುದು ಸರ್ವಾಂಗದೊಳಲ್ಲಿಯು ।
ಉಮ್ಮುತಿಹುದು ಸುಖವೊಳಗೆ ॥
ಮುಂಪಾಯಿದೊಂದು ವಿಸ್ಮಯವೆಂದೆನುತ ವರ ।
ಬೊಮ್ಮದೊಳೋಲಾಡುತಿಹುದು ॥ ೧೦ ॥

ಸಂಕಲ್ಪವಿಲ್ಲ ವಿಕಲ್ಪವಿಲ್ಲೊಂದರ ।
ಸೋಂಕಿಲ್ಲ ತನ್ನನೆ ತಾನು ॥
ಸೋಂಕಿ ತನ್ನೊಳು ಹುಟ್ಟಿದಾನಂದರಸದೊಳು ।
ತೇಂಕಾಡುತಿದ್ದನಾ ರಾಯಾ ॥ ೧೧ ॥

ಒಳಗುಮ್ಮಿದಾನಂದ ಹೊರಸೂಸುವಂತೆ ಕಂ ।
ಗಳಲೊಗುತಿಹುದು ಮುದಾಶ್ರು ॥
ಪುಳಕವೆದ್ದಿಹುದು ಸರ್ವಾಂಗದೊಳಗೆ ಹಂಸ ।
ಕಳೆಯೊಳಿದ್ದನು ಕಳಾರತ್ನಾ ॥ ೧೨ ॥

ಕೋಗಿಲೆದನಿಯಂತೆ ವೀಣಾರವದಂತೆ ।
ರಾಗ ದೋರುವುದೊಮ್ಮೆ ನಾದಾ ॥
ಸಾಗರಘೋಷ ತೋರುವುದು ಕರ್ಣದೊಳು ।
ಲಾಗುಯೋಗ ಬ್ರಹ್ಮಶಕ್ತಿ ॥ ೧೩ ॥

ನಿಂದೆಳ ಮುತ್ತಿನಂತೊಪ್ಪುವ ನಿರ್ಮಲ ।
ಬಿಂದುವ ಕಾಣ್ಮನೊಮ್ಮೊಮ್ಮೆ ॥
ನಿಂದಲ್ಲೆ ನಿಲ್ಲದುಳ್ಕಿನವೊಲು ಚಲಿಸುವಾ- ।
ನಂದ ಕಲೆಯ ಕಾಣ್ಬನೊಮ್ಮೆ ॥ ೧೪ ॥

ರತ್ನ ಮಾಲೆಗಳಂತೆ ಸರ್ವಾಂಗದೊಳಗೆ ಪ್ರ- ।
ಯತ್ನಿತಾಕ್ಷರಗಳ ಕಾಣ್ಬಾ ॥
ರತ್ನಮೂರೊಡಲಾದ ಹಂಸನ ಕಂಡು ।
ಪತ್ನ ಕರ್ಮವ ಸುಡುತಿಹುದು ॥ ೧೫ ॥

—ರತ್ನಾಕರ

—೦—

## [ ೩೦ ]
## ಆತ್ಮದರ್ಶನದಿಂದ ಪರಮಾನಂದ

ಪಳಕಿನ ಶಿಲೆಯೊಳು ನಿರ್ಮಿಸಿದ
ಸಲೆ ಜಿನರಾಕೃತಿಯಂತೆ ।
ಒಲಿದು ನಿರೀಕ್ಷಿಸಿ ನಿನ್ನೊಳಗೆ
ಬೆಳಗೊಂದಪ್ಪುದು ನೋಡಿ ॥ ೧ ॥

ನೋಡಿದೊಡಾತ್ಮನ ತೀರ್ಥವನೆ
ಕುಡಿದೊಡಾತ್ಮದಿ ಮುಕ್ತಿ ।
ಪಾಡಿದದಾಗಲೆ ಕರ್ಮತತಿ
ಓಡುವನವನಂಜಿ ಬೆಚ್ಚಿ ॥ ೨ ॥

ನಿರವಧಿ ಗುಣನಿಧಿ ಚಿನ್ಮಯನ
ಹರುಷದಿ ಭಾವಿಸುವಲ್ಲಿ ।
ಸ್ಫುರಿಸುವ ಪರಮಾನಂದವನು
ವರ ಶಮವೆಂಬನು ಯೋಗಿ ॥ ೩ ॥

ಪರ್ವಿದ ಪರಮಾನಂದವಿದು
ಸರ್ವರ ಮುಕ್ತಿಗೆ ಹೇತು ।
ದುರ್ವಾರೇಂದ್ರಿಯದಂತಿಗಳ
ಪೆರ್ವಲಕಿದು ಮೃಗವೈರಿ ॥ ೪ ॥

ಇದು ಚಿಂತಾಮಣಿ ಜಾಣರಿಗೆ
ಇದು ಪಾವನ ಸುರಧೇನು ।
ಇದು ನಿರುಪಾಧಿಕ ಸುರಕುಜವು
ಚಿದಮಲ ಸೌಖ್ಯವಿಕಾಸಿ ॥ ೬ ॥

ಇದು ಸುರವಿದ್ಯಾಸಾಗರವು
ಇದು ಭವರೋಗದ ಮದ್ದು ।
ಇದು ಕುದೃಷ್ಟಿಗಳಂಜನವು
ಚಿದಮಲಸೌಖ್ಯವಿಕಾಸಿ ॥ ೭ ॥

ಇದುವೆ ಸುಶೀಲವು ಮುನಿಗಳಿಗೆ
ಇದುವೆ ಮನೋಜನ ವೈರಿ ।
ಇದುವೆ ರಹಸ್ಯವು ಜನಮತದ
ಚಿದಮಲಸೌಖ್ಯವಿಕಾಸಿ ॥ ೮ ॥

ಇದುವೆ ವಿಚಾರದ ಕಟ್ಟಕಡೆ
ಇದು ಚಾತುರ್ಯದ ಗಾಡಿ ।
ಇದುವೆ ಚೂಡಾಮಣಿ ಭೂತ್ರಯದ
ಚಿದಮಲ ಸೌಖ್ಯವಿಕಾಸಿ ॥ ೯ ॥

ಇದುವೆ ಸುಖಾಮೃತ ಭಾಜನವು
ಇದುವೆ ಸೌಖ್ಯದ ಕಡೆಯಣಾ ।
ಇದುವೆ ಸುಸಾರವು ಶಾಸ್ತ್ರಗಳ
ಚಿದಮಲ ಸೌಖ್ಯವಿಕಾಸಿ ॥ ೧೦ ॥

—ಕಲ್ಯಾಣಕೀರ್ತಿ

## (ಇ) ವಚನಗಳು:—

### ( ೮೫ )

### ಧ್ಯಾನದಲ್ಲಿಯ ಸುಗ್ಗಿ

ನೆನಹಿನ ನಿಧಿಯು ನೋಡಾ !
ಎನ್ನ ಅರವಿನ ಘನವ ನೋಡಾ !
ಆಹಾ ಎನ್ನ ಪುಣ್ಯವೇ !
ಆಹಾ ಎನ್ನ ಕಂಗಳ ಮನೆಯ ಮಾಡಿಕೊಂಡಿಪ್ಪ ನಿತ್ಯದ ಬೆಳಗೇ !
ಎನ್ನ ಧ್ಯಾನದೊಳಗಣ ಸುಗ್ಗಿಯೆ,
**ನಿಃಕಳಂಕ ಮಲ್ಲಿಕಾರ್ಜುನ,**
ನಿಮ್ಮ ಶರಣ ಪ್ರಭುವಿನ ಪಾದಕ್ಕೆ
ನಮೋ ನಮೋ ಎನುತಿರ್ದೆನು

### ( ೮೬ )

### ಚಿತ್ಸೂರ್ಯನುದಯ

ಪಶ್ಚಿಮಗಿರಿಯಲ್ಲಿ ಚಿತ್ಸೂರ್ಯನುದಯವಾದುದ ಕಂಡೆ !
ನುತ್ತಮುತ್ತಲಿನ ಕತ್ತಲೆಯೆಲ್ಲ, ಅತ್ತಿತ್ತ ಹರಿದು ಹೋಹುದ ಕಂಡೆ!
ಹತ್ತು ದಿಕ್ಕಿನ ಒಳಹೊರಗೆಲ್ಲ, ಬೆಳಗಿನ ಪೊತ್ತವೆ ತುಂಬಿ ತುಂಬಿದ್ದ ಕಂಡೆ !
ಮುಚ್ಚಿದ್ದ ಕಮಲಂಗಳೆಲ್ಲ ಬಿಚ್ಚಿ ಅರಳಲಾಗಿ,
ಅಚ್ಚಹೊನಗಂಧವು ದೆಸೆದೆಸೆಗೆ ಎಸೆದುದ ಕಂಡೆ !
ಇಂತಿದರ ಕುಶಲವ ಕಂಡು,
ಬೆರಗಾದೆನಯ್ಯ **ಅಖಂಡೇಶ್ವರಾ**

### ( ೮೭ )

### ಅಂಗವಿಲ್ಲದ ರೂಪ ಕಂಡೆ

ಎನ್ನ ಮನದ ಕೊನೆಯ ಮೊನೆಯ ಮೇಲೆ,
ಲಿಂಗವಿಲ್ಲದ ರೂಪವ ಕಂಡು ಮರುಳಾದೆನಪ್ಪಾ !

ಆತನ ಕಂಡು ಬೆರಗಾದೆನವ್ವಾ !
ಎನ್ನಂತರಂಗದ ಆತ್ಮನೊಳಗೆ,
ಅನುಮಿಷ ನಿಜೈಕ್ಯ **ಗುಹೇಶ್ವರನ** ಕಂಡು

( ೮೮ )

**ಅನಿಲದಲ್ಲಿಯ ತಂಪಿನಂತೆ ಕಳೆಯಲ್ಲಿಯ ರೂಪ**

ಹೂವಿನೊಳಗಣ ಕಂಪ ಹೊರಸೂಸಿ
ಸುಳಿವ ಅನಿಲನಂತೆ,
ಅಮೃತದೊಳಗಣ ರುಚಿಯು,
ನಾಲಿಗೆಯ ತುದಿಯಲ್ಲಿ ಅರಿವನ ಚೇತನದಂತೆ
ನಿಲವಿಲ್ಲದ ರೂಪ ಕಳೆಯಲ್ಲಿ ಭೇದಿಸುವವನ ಪರಿ **ರಾಮನಾಥಾ !**

( ೮೯ )

**ಅಮೃತ ವರ್ಷ**

ಅಂಬರದೊಳಗಿನ ಅಮೃತಕೊಳನುಕ್ಕಿ,
ಕುಂಭಿನಿಯ ಮೇಲೆ ಸೂಸಲು,
ಅಲ್ಲಿರ್ದ ಸಕಲ ಬನವೆಲ್ಲ,
ಅಮೃತವ ಕಂಡು, ದಣಿಯೆ ಉಂಡು,
ಅನಿತ್ಯದ ಭೋಗವ ಮರೆದು,
ಅಸತ್ಯದ ಹಂಗು ಹರಿದು,
ನಿತ್ಯ ಮುಕ್ತರಾಗಿರ್ದರಯ್ಯ
**ಅಖಂಡೇಶ್ವರಾ !**

( ೯೦ )

**ನಿಮ್ಮ ನೋಟ ಕೂಟದಿಂದ ಪರಮ ಸುಖ**

ನಿಮ್ಮ ನೋಟವನಂತ ಸುಖ,
ನಿಮ್ಮ ಕೂಟ ಪರಮ ಸುಖವಯ್ಯ !

ಅಷ್ಟಕೋಟಿ ರೋಮಂಗಳೆಲ್ಲ
ಕಂಗಳಾಗಿ ನೋಡುತ್ತಿದ್ದೆನು
**ಕೂಡಲಸಂಗಮದೇವಯ್ಯ** ! ನಿಮ್ಮ ನೋಡಿ ನೋಡಿ,
ಎನ್ನ ಮನದಲಿ ರತಿಹುಟ್ಟಿ,
ನಿವಿರ್ದವೆನ್ನ ಕಂಗಳು

( ೯೧ )

## ಸ್ವಾನುಭವದ ಸುಖವ ಹೇಳಬಾರದು

ಹಾಲುಂಡ ಸವಿಯ ಮೇಲುಂಡ ಪಂಕ್ತಿಯ ಹೇಳಬಹುದಲ್ಲದೆ,
ಸುಖಸೋಂಕಿನ ಸ್ವಾನುಭವವ,
ಹೇಳಬಾರದು ಕೇಳಬಾರದು
ಇಂಬಿನ ಸೋಂಕು ಸಂಬಂಧವಳಿದ ಬಳಿಕ ಉಪಚಾರವುಂಟೇ ?
**ಕೂಡಲಚನ್ನಸಂಗಯ್ಯನ** ಅರುಹಿಂದಲೆ ಅರಿದೆನಲ್ಲದೆ,
ಎನಗೆ ಬೇರೆ ಸ್ವತಂತ್ರವಿಲ್ಲ ಕೇಳಯ್ಯ

( ೯೨ )

## ಅಖಂಡತನ ಕಂಡೆನೆಂಬವರುಂಟೆ ?

ಖಂಡಿತವಿಲ್ಲದ ಅಖಂಡಿತನೇ !
ನಿಮ್ಮ ಕಂಡವರುಂಟೇ ಹೇಳಯ್ಯ ?
ಕಂಡೆನೆಂಬವರೆಲ್ಲ ಬಂಜೆಯ ಮಕ್ಕಳು
ನಿನ್ನಿಂದ ಹೆಜ್ಜೆಯ ಕೆಳಗೆ ಬಿಂದು ಒಂದು
ಹುಟ್ಟಿ ಬೆಳಗುವ ಚಂದವ ಕಂಡು ಕಣ್ದೆರೆದೆ ಕಾಣಾ
**ರಾಮನಾಥಾ**

( ೯೩ )

## ನಿಮ್ಮನ್ನು ಮುಟ್ಟಿದವರು ನಿಮ್ಮಂತಪ್ಪರು

ಜ್ಯೋತಿ ಮುಟ್ಟಿದ ಬತ್ತಿಯೆಲ್ಲ, ಜ್ಯೋತಿಯಪ್ಪವಯ್ಯ
ಸಾಗರ ಮುಟ್ಟಿದ ನದಿಗಳೆಲ್ಲ, ಸಾಗರವಪ್ಪವಯ್ಯ

ಪ್ರಸಾದ ಮುಟ್ಟಿದ ಪ್ರಸಾದವೆಲ್ಲ, ಪ್ರಸಾದವಪ್ಪವಯ್ಯ
ಲಿಂಗ ಮುಟ್ಟಿದ ಅಂಗವೆಲ್ಲ ಲಿಂಗವಪ್ಪವಯ್ಯ ।
**ಸಕಳೇಶ್ವರ**ದೇವ, ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯ

( ೯೪ )

## ಲಿಂಗೈಕ್ಯದ ಸ್ವರೂಪ

ಹೊಸಮುತ್ತಿನ ಸುಪ್ರಾಣಿಯಂತೆ ಲಿಂಗೈಕ್ಯವೂ
ಸ್ಫಟಿಕದ ಘಟದೊಳಗಣ ಪ್ರಭೆಯಂತೆ ಲಿಂಗೈಕ್ಯವೂ
ವಾಯುವಿನ ಸಂಚದ ಪರಿಮಳದ ನಿಲವಿನಂತೆ
ಲಿಂಗೈಕ್ಯನ ಸಂಬಂಧವಿದು **ಗುಹೇಶ್ವರಾ**

( ೯೫ )

## ಲಿಂಗ ಪ್ರಾಣ ಸಂಬಂಧ

ತುಂಬಿ ಪರಿಮಳ ಉಂಡುದೋ ?
ಪರಿಮಳ ತುಂಬಿಯ ನುಂಡುದೋ ?
ಲಿಂಗ ಪ್ರಾಣವಾಯಿತೋ ?
ಪ್ರಾಣ ಲಿಂಗವಾಯಿತೋ ?
**ಗುಹೇಶ್ವರಾ** ಈ ಉಭಯದ ಭೇದವ
ನೀನೇ ಬಲ್ಲೆ

( ೯೬ )

## ಒಡಲಿಲ್ಲದ ಬಯಲು

ಆಡಬಾರದ ಬಯಲು, ನೋಡಬಾರದ ಬಯಲು;
ನುಡಿಯಬಾರದ ಬಯಲು, ಹಿಡಿಯಬಾರದ ಬಯಲು;
ಈ ಒಡಲಿಲ್ಲದ ಬಯಲೊಳಡಗಿಪ್ಪ ಭೇದವ,
ಈ ಲೋಕದ ಜಡರೆತ್ತ ಬಲ್ಲರೈ **ರಾಮನಾಥಾ** :

# ಮಕರಂದ

ಆನಂದಂ ಬ್ರಹ್ಮಣೋವಿದ್ವಾನ್
ನ ಬಿಭೇತಿ ಕದಾಚನ || ೧ ||

—ತೈತ್ತಿರೀಯ

ಭಿದ್ಯತೆ ಹೃದಯ ಗ್ರಂಥಿಃ
ಛಿದ್ಯಂತೇ ಸರ್ವಸಂಶಯಾಃ |
ಕ್ಷೀಯಂತೇ ಚಾಸ್ಯ ಕರ್ಮಾಣಿ
ತಸ್ಮಿನ್ ದೃಷ್ಟೇ ಪರಾವರೆ || ೨ ||

—ಮುಂಡಕ

ಆತ್ಮರತಿಃ ಆತ್ಮಕ್ರೀಡಃ ಕ್ರಿಯಾವಾನೇಷ
ಬ್ರಹ್ಮವಿದಾಂ ವರಿಷ್ಠಃ || ೩ ||

—ಮುಂಡಕ

ವಿಸೃಜತಿ ಹೃದಯಂ ನಯಸ್ಯ ಸಾಕ್ಷಾತ್
ಹರಿರವಶಾಭಿಹಿತೋಽಪ್ಯಘೌಘನಾಶಃ |
ಪ್ರಣಯರಶನಯಾ ಧೃತಾಂಘ್ರಿಪದ್ಮಃ
ಸ ಭವತಿ ಭಾಗವತಪ್ರಧಾನ ಉಕ್ತಃ || ೪ ||

ಸಾಧವೋ ಹೃದಯಂ ಮಹ್ಯಂ
ಸಾಧೂನಾಂ ಹೃದಯಂ ತ್ವಹಂ |
ಮದನ್ಯತ್ತೇ ನ ಜಾನಂತಿ
ನಾಹಂ ತೇಭ್ಯೋ ಮನಾಗಪಿ || ೫ ||

—ಶ್ರೀ ಭಾಗವತ

ಸರ್ವಭೂತಹಿತೇರತಾಃ || ೬ ||

—ಶ್ರೀ ಗೀತಾ

— ೭೧ —

## ಇದ್ದು ಜೈಸಬೇಕು

( ರಾಗ—ಪೂರ್ವಿ ಆದಿತಾಳ )

ಈಸಬೇಕು ಇದ್ದು ಜೈಸಬೇಕು
ಹೇಸಿಕೆ ಸಂಸಾರದಲ್ಲಿ ಆಶಾಲೇಶವಮಾಡದಂತೆ ॥ ಪ ॥

ತಾವರೆಯು ಜಲದಂತೆ ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮನೆನುತ ಪಾಡಿ ಕಾಮಿತ ಕೈಕೊಂಬರೆಲ್ಲ ॥
ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ
ಮೀರಿ ಆಸೆ ಮಾಡದಂತೆ ಧೀರ ಕೃಷ್ಣನ ನೆನೆವರೆಲ್ಲ ॥
ಮಾಂಸದಾಸೆಗೆ ಮತ್ಸ್ಯ ಸಿಲುಕಿ ಹಿಂಸೆಪಟ್ಟ ಪರಿಯಂತೆ
ಮೋಸಹೋಗದಂತೆ ಜಗದೀಶ **ಪುರಂದರ ವಿಠಲ**ನೆನುತ

—ಪುರಂದರದಾಸ

— ೦ —

— ೭೨ —

## ಸ್ವಹಿತ ಪಡೆದವ ಉಪಾಧಿರಹಿತ

( ರಾಗ—ಭೂಪ ಝುಮಾಳಿ )

ದಾವ ಪಡೆದ ಸ್ವಹಿತಾ ।
ಅವನೆ ಉಪಾಧಿರಹಿತ ॥ ಪ ॥

ಆಶ್ರಯಿಸಿದನು ದಾವನು ಶ್ರಯಧೇನು ।
ನಾಸ್ತಿಕಪವಗೆಲ್ಲಹುದು ತಾನು ॥ ೧ ॥

ಇಪದಾವನು ಸುರತರುವಿನ ಬಳಿಯು ।
ಅವಗೆಲ್ಲಿಹದುದರದ ಕಳವಳಿಯು ॥ ೨ ॥

ಸುರನದಿಯಲಿ ದಾವನ ಸಹವಾಸ ।
ಧರಿಯೊಳಗವಗೆಲ್ಲಿಹ ಮಹಾದೋಷ ॥ ೩ ॥

ರವಿಪ್ರಭೆಯೊಳು ದಾವನಿಹ ಕೂಡಿ ।
ಅವಗೆಲ್ಲಿಯ ಕಗ್ಗತ್ತಲೆ ನೋಡಿ ॥ ೪ ॥

ದಾವ ಗುರು **ಮಹಿಪತಿ** ವಾದ್ಹೊಂದಿದ ।
ಅವಗೆಲ್ಲಿಹದು ತಾ ಭವಬಂಧ ॥ ೫ ॥

—ಮಹಿಪತಿ

—೦—

— ೭೩ —

## ಎಲ್ಲ ಕರ್ಮ ಹರಿಪ್ರೇರಿತ

(ರಾಗ—ಕಾಂಬೋದಿ ಝಂಪೆತಾಳ)

ಇದ್ದರಿರಬೇಕು ಸಂಸಾರಸುಖದಲ್ಲೀಗೆ ।
ಪದ್ಮಪತ್ರವು ಜಲದೊಳಗಿದ್ದ್ಹಾಂಗೆ ॥ ಪ ॥

ನಡಿ ನಡಿಯಬೇಕ್ಹೀಂಗೆ, ನಡಿಯೊಳ್ಹರಿಬಿಡದ್ಹಾಂಗೆ ।
ನುಡಿ ನುಡಿಯಬೇಕು, ಹರಿ ನುಡಿಸಿದ್ಹಾಂಗೆ ॥
ಪಡೆದರಿದೆ ಪಡಿಯಬೇಕು, ಹರಿ ಒಡಲ ಹುಗದ್ಹಾಂಗೆ ।
ಅಡಿಗಡಿಗೆ ಹರಿಕೂಡಿ ಬಿಡದಗಲದ್ಹಾಂಗೆ ॥ ೧ ॥

ಉಂಡರುಣಬೇಕ್ಹೀಂಗೆ, ಉಂಡದ್ಹರಿಗುಣಿಸಿದ್ಹಾಂಗೆ ।
ಕೊಂಡರೆ ಕೊಳಬೇಕು ಹರಿಗೆ ಕೊಡಿಸಿದ್ಹಾಂಗೆ
ಮಂಡಣೆಯ ಮಾಡ ಹೀಗೆ, ಹರಿಗೆ ಮಂಡಿಸಿದ್ಹಾಂಗೆ ।
ಕಂಡುಕೊಂಬುರು ಹರಿ ಕಂಡು ವಲುವ್ಹಾಂಗೆ ॥ ೨ ॥

ಮಲಗಿ ಏಳುವದ್ಹೀಂಗೆ, ಮಲಗ್ಹರಿಗೇಳಿಸಿದ್ಹಾಂಗೆ ।
ತಿಳವು ತಿಳಿವದು ಹರಿ ತಿಳಿಸಿದ್ಹಾಂಗೆ ॥
ಸುಳಹವು ಸುಳವದು, ಹರಿ ಸುಳಸ್ಯಾಡಿದ್ಹಾಂಗೆ ।
ಒಲವು ಮಾಡುವದ್ಹೀಂಗೆ ಹರಿಯ ಒಲವಾದ್ಹಾಂಗೆ ॥ ೩ ॥

ಗತಿ ಪಡಿವದು ಹೀಂಗೆ, ಹರಿಗತಿಯಾಗುವ್ವಾಂಗೆ ।
ಅತಿಹರುಷಬಡು ಹರಿ ನೋಡುವ್ವಾಂಗೆ ॥
ಸಥಿಯ ಪಡೆವುದು ಹೀಂಗ್ಹರಿಯ ಸಥಿನಡಿಸಿದ್ದಾಂಗ ।
ಸ್ತುತಿಮಾಡು **ಮಹಿಪತಿ** ಪ್ರತಿಗಾಣದ್ದಾಂಗೆ ॥ ೪ ॥

—ಮಹಿಪತಿ

— ೦ —

— ೭೪ —

## ಬೂದಿಮುಚ್ಚಿದ ಕೆಂಡದಂತೆ ಇಪ್ಪರು

( ರಾಗ—ಕಾಂಬೋದಿ ಝಂಪೆ ತಾಳ )

ಬೂದಿ ಮುಚ್ಚಿದ ಕೆಂಡದಂತಿಪ್ಪರು ॥ ಪ ॥
ಈ ಧರೆಯ ಮೇಲೆ ಶ್ರೀಹರಿಭಕ್ತಜನರು ॥ ಅ ॥

ಅಂಗನೋಡಲು ಅಷ್ಟಾವಕ್ರವಾಗಿಪ್ಪರು
ಕಂಗಳಿಂದಲಿ ನೋಡೆ ಘೋರತರರು ।
ಮಂಗಳಾಂಗನ ಅಂತರಂಗದಲಿ ಭಜಿಸುತ್ತ
ಹಿಂಗದೆ ಸಂತಜನ ಸಂಗದೊಳಿಹರು ॥ ೧ ॥

ಶತ್ರು ಮಿತ್ರರುಗಳಾಸಮವಾಗಿ ಎಣಿಸುವರು
ಪುತ್ರ ಮಿತ್ರ ಭ್ರಾತೃಗಳ ನೆಚ್ಚರು ।
ಯಾತ್ರೆ ತೀರ್ಥಂಗಳಿಗೆ ಹೋಗುತ್ತ ಶ್ರೀಹರಿಯ
ಸ್ತೋತ್ರಗಳ ಮಾಡಿ ಸಾಧನೆ ಮಾಡಿಕೊಂಬವರು ॥ ೨ ॥

ಕಷ್ಟ ಸೌಖ್ಯಂಗಳನು ಕರಿವರದಗರ್ಪಿಪರು
ಇಟ್ಟು ತೊಟ್ಟದ್ದು ಹರಿಕೊಟ್ಟನೆಂಬುವರು ।
ಸೃಷ್ಟೀಶ ಸಿರಿ **ವಿಜಯ ವಿಠಲನ** ಪದಪದ್ಮ
ಮುಟ್ಟಿ ಭಜಿಸಿ ಮುಕ್ತಿಸಾಮ್ರಾಜ್ಯ ಪಡೆಯುವರು ॥ ೩ ॥

—ವಿಜಯದಾಸ

---

—೭೫—

## ಕಲ್ಪಭೂರುಹರಾದ ದಾಸರು ನರರೆ?

(ರಾಗ—ಕೇದಾರಗೌಳ ರೂಪತಾಳ)

ನೋಡಿರೈ ಕಲ್ಪ ಭೂರುಹರ !
ನಾಡೊಳಗಚ್ಯುತದಾಸರು ನರರೇ ॥ ಪ ॥

ಕ್ಷೀರ ಕೂಡಿದ ಜಲವ ನೀರೆನ್ನಬಹುದೇ?
ನೀರೊಳುದಿಸಿದ ಮುತ್ತು ನೀರಾಗೋದೇ?
ಆರಿದ ಭಾಂಡ ಮೃತ್ತಿಕೆ ಕೂಡಲರಿವುದೆ
ಶೌರಿಯ ಶರಣರ ನರರೆನ್ನ ಬಹುದೆ? ॥ ೧ ॥

ಹರಿಗೆರೆದ ನೀರು ತೀರ್ಥವೆನಿಸಿತು, ನರ
ಹರಿವುಂಡ ಚರವು ಪ್ರಸಾದವಾಯ್ತು
ಹರಿದಾಸರುಗಳೆಂಬ ನಾಮಧಾರಕರನ್ನು
ನರರೆನ್ನಬಹುದೇನೋ ಸುರರಿಗಧಿಕರನ್ನು ॥ ೨ ॥

ಪರಬ್ರಹ್ಮ ವಿಷ್ಣುವು, ಚರಬ್ರಹ್ಮ ವೈಷ್ಣವ
ವರಕೀನಲರಿಯರು ಮತಿಭ್ರಷ್ಟರು
ಧರೆಯೊಳು **ಪುರಂದರ ವಿಠಲನ** ದಾಸರ
ನರರೆಂದವಗೆ ಘೋರ ರೌರವ ನರಕ ॥ ೩ ॥

—ಪುರಂದರದಾಸ

—೦—

—೭೬—

## ತನು ತಂಬೂರಿಯಲ್ಲಿ ಪ್ರಣವನಾದದೊಡನೆ ಹಾಡುವ ದಾಸರು

( ರಾಗ— ಶ್ರೀರಾಗ ರೂಪತಾಳ )

ದಾಸರೋ ನಾವು । ಹರಿ । ದಾಸರೋ ನಾವು ॥ ಪ ॥

ದಾಸರೆನಿಸಿ ಧರ್ಮದಲ್ಲಿ ।
ಆಶೆಗಡಿದು ಲೇಸೆನಿಸುವ ॥

ಕಾಸು ಕವಡಿ ಕಾಲಿಲೊದ್ದು ।
ಈಶನೊಲಿಸಿಕೊಂಬುವಂಥಾ ॥ ೧ ॥

ತನುವು ತಂಬೂರಿಯ ಮಾಡಿ ।
ಪ್ರಣವ ನಾದ ಸ್ವರದಿ ಹಾಡಿ ॥
ಚಿನುಮಯಾತ್ಮನೊರವಿಲ್ಲೈದು ।
ಮನಿಯ ಭಿಕ್ಷೆ ಬೇಡುವಂಥ ॥ ೨ ॥

ಪರಶಿವನ ಮುಖಮುದ್ರೆಯನ್ನು ।
ಬರಸಿಯಿಟ್ಟು ಶಿರದಮೇಲೆ ॥
ಕರವ ಬಳಿದು **ಶಿಶುನಾಳೇಶ** ।
ವರವ ಕೊಟ್ಟು ನಲಹಿದಂಥ ॥ ೩ ॥

—ಶರೀಫಸಾಹೇಬ

— ೦ —

— ೭೭ —

## ಪರಮಾಮೃತವ ಸವಿದ ಪರಮಹಂಸರು

(ರಾಗ—ಸುವ್ರಾಟಿ; ರೂಪಕತಾಳ)

ಹಂಸನಾಗ ಲೋ । ಪರಮ । ಹಂಸನಾಗ ಲೋ ॥ ಪ ॥
ಹಂಸೊಹಂಸೊಹಂಸೊಯೆನುತ ।
ಧ್ವಂಸಗೈದು ದ್ವೈತ ಭಾವ ॥ ಅ ॥

ಮಾಯೆ ಮೂಲವನ್ನು ತಿಳಿದು ।
ಮಾಯೆ ಗುಣಗಳನ್ನು ಅಳಿದು ॥
ಮಾಯೆ ಕಳೆಯ ಸೆಳೆದು ಮುದದಿ ।
ಮಾಯೆ ಕಳೆಗತೀತನಾಗಿ ॥ ೧ ॥

ನೀರನುಳಿದು ರಾಜಹಂಸ ।
ಕ್ಷೀರ ಸವಿಯುವಂತೆ ಜಗದಿ ॥

ಮೂರು ದೇಹವುಳಿದು ಪೊಳೆವ ।
ಸಾರ ತತ್ವಸಾರ ಸವಿವ ॥ ೨ ॥

ನಿರುತ ಬ್ರಹ್ಮಚರ್ಯ ಶಾಂತಿ- ।
ಕರವೆನಿಪ್ಪ ಬ್ರಹ್ಮಪುರದೊಳ್ ॥
ಇರುವ ಅಮೃತಕೊಳದಿ ಮುಳುಗಿ ।
ಪರಮ ಅಮೃತರಸವ ಸವಿವ ॥ ೩ ॥

ನಿರುತ ಪಾಪಪುಣ್ಯವೆಂಬ ।
ಮೆರೆವ ಕಮಲ ವನವ ಮೆಲುತ ॥
ಸ್ಫುರಿಪ ಜ್ಞಾನವೆಂಬ ಬನದಿ ।
ಪರಮ ಸುಖದಿ ಚರಿಸುವಂಥ ॥ ೪ ॥

ಪೂರ್ಣ ಬ್ರಹ್ಮದಲ್ಲಿ ಆಡಿ ।
ಪೂರ್ಣ ಬೋಧನಾಗಿ ಉಂಡು ॥
ಅನ್ನ ಅಮೃತಮಾಡಿ ಸವಿದ ।
ಚನ್ನ **ಶ್ರೀಗುರುರಂಗ**ನೆಂಬ ॥ ೫ ॥

—ಶಂಕರಾನಂದ

—೦—

—೭೮—

## ಬ್ರಹ್ಮಾನಂದಭರಿತ ಯೋಗೀಶ್ವರನು

( ರಾಗ—ಶ್ಯಾಮಕಲ್ಯಾಣಿ; ದೀಪಚಂದಿ )

ಪರಮ ಬ್ರಹ್ಮಾನಂದ ಭರಿತದಿ ।
ಧರೆಯೊಳಿಹ ಯೋಗೀಶ್ವರಂ ॥
ಮೆರೆವ ಸೂರ್ಯನ ಪರಿ ವಿರಾಜಿಸಿ ।
ನಿರುತ ಸಾಕ್ಷಿಕನೆನಿಸುವಂ ॥ ಪ ॥

ಪರಮ ಮಂಗಳ ಶಾಂತಿಸ್ನಾನವು ।
ವಿರತಿ ಭಸ್ಮವ ಧರಿಸುವಂ ॥
ಪರಪತಿವ್ರತೆ–ಭಿಕ್ಷೆಕೊಳ್ಳುವ ।
ಕರುಣಕರ–ಪಾತ್ರೆನಿಸುವಂ ॥ ೧ ॥

ನಿರುತ ತತ್ವವು ಎಂಬದೇಶದಿ ।
ಚರಿಸುತಾತನ ಪೂರ್ವದ ॥
ವರ ಕುಲಗಳಿಪ್ಪತ್ತುವೊಂದನು ।
ಭರದಿ ಪಾವನಗೈಯ್ಯುವಂ ॥ ೨ ॥

ಭಾವಿಸಲಿಕಿಂತಿರುವ ಯೋಗಿಯು ।
ಯಾವ ರೋಗದಿ ದುಃಖದಿಂ ॥
ಯಾವವಿಧದಿ ಬಿಡಲು ಘಟವನು ।
ಓವಿತಾ ಬಯಲಾಗುವಂ ॥ ೩ ॥

ಕ್ಷೀರ ಕ್ಷೀರವ, ಘೃತವು ಘೃತವಂ ।
ಸೇರುವಂದದಿ ಯತಿವರಂ ॥
ಪ್ರಾರಬಂಧುಣ್ಣುತಲಿ ಅಂತ್ಯಕೆ ।
ಸೇರುವನು ಕೈವಲ್ಯವಂ ॥ ೪ ॥

ಆತಗಿಲ್ಲವು ಶ್ರಾದ್ಧಕರ್ಮ ಗ- ।
ಳಾತಗಿಲ್ಲವು ದಹನವು ॥
ಆತ **ಗುರುಮಹಲಿಂಗ**ನೆನ್ನಿಸಿ ।
ಖ್ಯಾತಿ ಪೂಜೆಯಗೊಂಬುವಂ ॥ ೫ ॥

—ಶಂಕರಾನಂದ

—೦—

## (ಅ) ಪದ್ಯಗಳು:—

### [ ೩೧ ]

### ಜ್ಞಾನಿಯ ಲಕ್ಷಣ

ನುಡಿವೆನೆಂದರೆ ಬಾರದಾಸುಖ ತಾನುಂಡು ।
ಕಡು ತೃಪ್ತನಾಗಿರಬಹುದು ॥
ನಡೆವ ನುಡಿವ ಜಗದಾಟವೆಲ್ಲಾತಗೆ ।
ಜಡವಾಗಿ ಕಾಣಿಸುತಿಹುದು ॥ ೧ ॥

ಲೋಕವೆಲ್ಲವನಿಗೆ ಹುಚ್ಚನಂತಿಹುದವ ।
ಲೋಕಕೆ ಹುಚ್ಚನಂತಿಹನು ॥
ವಾಕು ಮುದ್ರಿಸುವುದೊವ್ಮೊಮ್ಮೆ ನುಡಿದು ಕೊಡೆ ।
ಮೂಕನಂತಿಹನಾತ್ಮಯೋಗಿ ॥ ೨ ॥

ಏಕಾಂತವನು ಬಯಸುವ ಗೋಷ್ಟಿಗೆಳಸನು ।
ಏಕಾಂಗಿಯಾಗಿರುತಿಹನು ॥
ಲೋಕದಗ್ರಕೆ ಹೋಹನೊಮ್ಮೆ ತಾ ತನ್ನಾತ್ಮ ।
ಲೋಕದೊಳಿರುತಿಹನೊಮ್ಮೆ ॥ ೩ ॥

ತನ್ನ ತಾನೀಕ್ಷಿಸಿ ತನ್ನ ಸುಖವನುಂಡು ।
ತನ್ನೊಳು ತಾನುಬ್ಬಿನಗುವಾ ॥
ಅನ್ನಿಗರಿಗೆ ಹೇಳನಿವು ಧರ್ಮಯೋಗವ ।
ಮುನ್ನ ಸಾಧಿಪನ ಚಿಹ್ನಗಳು ॥ ೪ ॥

ಆ ಧರ್ಮ ಸಾಧ್ಯವಾದರೆ ಕೇಳ್ದ ಜನಕಷ್ಟು ।
ಬೋಧಿಸುವನು ಭವ್ಯರರಿದು ॥
ಬೋಧೆಯ ಕೇಳ್ದರೆಂಬಾನಂದ ತನಗಿಲ್ಲ ।
ಬೋಧೆಕೇಳದರೆ ನೋವಿಲ್ಲ ॥ ೫ ॥

ಕೆಲಬರಿಂತುಪಕರಿಸುತ ನಡೆವರು ಮತ್ತೆ ।
ಕೆಲಬರಾಗುಂಜನು ಹೊಗರು ॥
ಬಲಿದ ಸಂವರಗೂಡಿ ನಿರ್ಜರಿಸುತ ಹೋಹ ॥
ರಲೆ ಭವ್ಯ ಧರ್ಮಯೋಗವಿದು ॥ ೬ ॥

ಉಂಡು ತೇಗುವನಂತೆ ತಾನಾತ್ಮಯೋಗದೋ - ।
ಳುಂಡ ಸವಿಯ ಕೃತಿಮಾಳ್ಪಾ ।
ಕಂಡುದ ತೋರುವಂತೊಳಗೆ ತನ್ನಾತ್ಮನ ।
ಕಂಡುದನುಸುರಿ ತೋರುವನು ॥ ೭ ॥

ಬೇಕಾದರಾಡಿಸಿ ಗಾಳಿಪಟವನರ್ತಿ ।
ಸಾಕಾಗಿ ಸುರುಳುವನಂತೆ ॥
ನೂಕಿ ಚಿತ್ತವ ಹೊರಗಾಡಿಸುವನು ತನ್ನೊ - ।
ಳೇಕವಾಗಿರುಸುವನೊಮ್ಮೆ ॥ ೮ ॥

ಉಂಡುಪವಾಸಿ ಬಳಸಿ ಬ್ರಹ್ಮಚಾರಿ ಭೂ - ।
ಮಂಡಲವಿದ್ದು ನಿಸ್ಸಂಗ ॥
ಮಂಡೆ ಬೆಳೆದು ಮನದೊಳಾದ ತಪಸಿಯ ।
ಕೊಂಡಾಡಲಳವೆ ಚಕ್ರಿಯನು ॥ ೯ ॥

ಸಂಕಲ್ಪವಿಲ್ಲ ವಿಕಲ್ಪವಿಲ್ಲೊಂದರ ।
ಸೋಂಕಿಲ್ಲ ತನ್ನನೆ ತಾನು ॥
ಸೋಂಕಿ ತನ್ನೊಳು ಹುಟ್ಟಿದಾನಂದರಸದೊಳು ।
ತೇಂಕಾಡುತಿದ್ದನಾ ಭೋಗಿ ॥ ೧೦ ॥

—ರತ್ನಾಕರ

—೦—

## [ ೩೨ ]
## ಶಿವನಾದ ಚಿದಾನಂದ

ಶಿವನನ್ನೆ ಕಂಡು ವಳಹೊರಗೆಲ್ಲ ಜಗವ
ಶಿವನೆಂದು ಅಣುರೇಣು ಕಾಷ್ಠನೋಡುವಾ ।
ಶಿವನ ಹೊರ್ತು ಇನ್ನೊಂದು ಇಲ್ಲವೆಂದಿರುವಾ
ಶಿವನಾದ ಚಿದಾನಂದ ತಾನಾಗಿ ಮೆರೆವಾ ॥ ೧ ॥

ಮಾಡುವನು ಸಂಸಾರ ತಾನು ಅಂಟದಲಿ
ಮೋಡದೊಳಗಿರುತಿಹಾ ಸೂರ್ಯನಂದದಲಿ ।
ಆಡಲೇನು ? ವಿಭೂತೀಗ ಆನಂದದಲಿ
ಗೂಢ ಚಿದಾನಂದ ಲಿಂಗೈಕ್ಯತೆರದಲಿ ॥ ೨ ॥

ಕೇರ ಬೀಜವು ತಾನು ಹೊರಗೆ ಇದ್ದಂತೆ
ನೀರಿಗಂಟದಾ ತಾವರಿಯ ಪರ್ಣದಂತೆ ।
ಘೋರ ಸಂಸಾರದಲಿ ಆ ಪ್ರಕಾರದಂತೆ
ವೀರ ಚಿದಾನಂದ ಲಿಂಗೈಕ್ಯ ಇಹನಂತೆ ॥ ೩ ॥

ಕುಂಬಾರ ಹುಳವು ಕೆಸರಿನೊಳು ಇಹತೆರಧಿ
ತುಂಬಿದಾ ಉದಕದಿ ಚಂದ್ರ ಬೆರೆದ ತೆರದಿ ।
ಸಂಭ್ರಮದಿ ಸಂಸಾರ ಆ ಬಗೆ ವಿಧದಿ
ಶಂಭು ಚಿದಾನಂದ ಲಿಂಗೈಕ್ಯ 'ಈ ತೆರದಿ ॥ ೪ ॥

ನಾಲಿಗೆಗೆ ಹೆಡಸು ತಾ ಅಂಟಿದಾವೋಲು
ಬಹಳ ಶಾಖದಿ ಸವಟು ರುಚಿನರಿಯದೋಲು ।
ಕೇಳು ಸಂಸಾರದಿ ಆ ಸಾಕ್ಷಿವೋಲು
ತೋಲ ಚಿದಾನಂದ ಲಿಂಗೈಕ್ಯ ತೆರದಲು ॥ ೫ ॥

ಕೊಡದೊಳಗೆ ಬೈಲು ಹತ್ತುದಲೆಯಿದ್ದಂತೆ
ನೋಡುವಾ ಕನ್ನಡಿಯೊಳಗಿನ ಘಟದಂತೆ ।
ಜಡ ತನುವಿನಲ್ಲಿ ಪರಮಾತ್ಮ ಇದ್ದಂತೆ
ಮೃಡ ಚಿದಾನಂದ ಲಿಂಗೈಕ್ಯ ಬಗೆ ಅಂತೆ ॥ ೬ ॥

ಬಡತನವು ಬಂದರೆಯು ವಂದೆಸಮನಿಹಾ
ಕಡುಭಾಗ್ಯವಿರಲು ವಂದೆ ಸಮನಿಹಾ ।
ಮಡದಿ ಮಕ್ಕಳು ತೀರೆ ವಂದೆ ಸಮನಿಹಾ
ದೃಢ ಚಿದಾನಂದನಾಗಿ ಲಿಂಗೈಕ್ಯಯೀಹಾ ॥ ೭ ॥

ಮತದಾಭಿಮಾನ ಮಾನಭಿಮಾನವಿಲ್ಲಾ
ಮತಿವಿಕಾರವಿಲ್ಲಯೆಂದಿಗೂ ಮರುಕಿಲ್ಲಾ ।
ಅತಿ ಚಿದಾನಂದರನು ಕೂಡಿರು ಬಲ್ಲಾ
ನಿರ್ವಿಕಾರ ಚಿದಾನಂದನಿಗೆ ಏನೇನು ಇಲ್ಲಾ ॥ ೮ ॥

ಕಷ್ಟ ಬಡವರ ನೋಡಿ ಕರುಣ ತಾನು
ಇಷ್ಟನ್ನವನು ಅವರಿಗಿಕ್ಕುವನು ।
ಒಟ್ಟೆಯನೆ ಕೊಡುವಾ ತಾನೀಗ ವುಟ್ಟುದನು
ಮುಟ್ಟಿ ಚಿದಾನಂದ ಮಹಿಮರಿಗೆ ನಡಿವನು ॥ ೯ ॥

ಸುಖಿಯಾಗಿರುವ ಆವಾವ ಕಾಲದಲಿ
ಸುಖಿಯಾಗಿಹನು ಸತಿಸುತರ ನಡುವಿನಲಿ ।
ಸುಖಿಯಾಗಿಹನು ಮನೆಮಾರು ಹೋದಲಿ
ಸುಖಿಯಾಗಿ ಚಿದಾನಂದ ಬೆಳಗುತಲಿ ತನ್ನಲ್ಲಿ ॥ ೧೦ ॥

—ಚಿದಾನಂದ

—೦—

## (ಇ) ವಚನಗಳು:-—

### ( ೯೭ )

### ಹಿರಿದು ಕಿರಿದೆಂಬ ಭೇದವ ಮರೆದವ ಶರಣ

ನಾನು ಘನ ತಾನು ಘನ!
ಎಂಬ ಹಿರಿಯರುಂಟೇ ಜಗದೊಳಗೆ ?
ಹಿರಿಯರ ಹಿರಿಯತನದಿಂದೇನಾಯಿತ್ತು ?
ಹಿರಿದು ಹಿರಿದೆಂಬ ಭೇದವಡಗಿದರೆ,
ಆತನೇ ಶರಣ **ಗುಹೇಶ್ವರಾ**

### ( ೯೮ )

### ಘನದಲ್ಲಿ ಬೆರೆವುದೇ ಹಿರಿತನ

ಅಜಕೋಟಿ ವರುಷದವರೆಲ್ಲರು ಹಿರಿಯರೇ ?
ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ ?
ನಡು ಮುರಿದು, ತಲೆ ನಡುಗಿ,
ನೆರೆತೆರೆ ಹೆಚ್ಚಿ, ಮತಿಗೆಟ್ಟು,
ಒಂದನಾಡಹೋಗಿ ಒಂಬತ್ತನಾಡುವ
ಅಜ್ಞಾನಿಗಳೆಲ್ಲ ಹಿರಿಯರೇ ?
ಅನುವರಿತು ಘನ ಬೆರಸಿ,
ಹಿರಿದು ಕಿರಿದೆಂಬ ಭೇದವ ಮರೆದು
**ಕೂಡಲ ಚೆನ್ನಸಂಗಯ್ಯ**ನಲ್ಲಿ ಬೆರಸಿ
ಬೇರಿಲ್ಲದಿಪ್ಪ ಹಿರಿಯತನ
ನಮ್ಮ ಮಹಾದೇವಿಯಕ್ಕನಿಗಾಯಿತ್ತು

### ( ೯೯ )

### ತುಂಬಿದುದು ತುಳುಕದು

ತುಂಬಿದುದು ತುಳಕದು ನೋಡಾ !
ನಂಬಿದುದು ಸಂದೇಹಿಸದು ನೋಡಾ !

ನೆರಿಯರಿದುದು ಮರೆಯದು ನೋಡಾ !
**ಚೆನ್ನಮಲ್ಲಿಕಾರ್ಜುನಯ್ಯ**, ನೀನೊಲಿದ ಶರಣಂಗೆ
ನಿಸ್ಸೀಮ ಸುಖ ನೋಡಾ

## ( ೧೦೦ )
## ಕತ್ತಲೆ ಕೊರತೆಗಳ ಅಭಾವ

ಕೈಯಲ್ಲಿ ಜ್ಯೋತಿಯ ಹಿಡಿದು, ಕತ್ತಲೆ ಎನಲೇತಕ್ಕೆ ?
ಪರುಷರಸ ಕೈಯಲ್ಲಿದ್ದು, ಕೂಲಿಯ ಮಾಡಲೇತಕ್ಕೆ ?
ಕ್ಷುತ್ತು ನಿವೃತ್ತಿಯಾದವಂಗೆ,
ಕಟ್ಟೋಗರದ ಹೊರೆಯ ಹೊರಲೇತಕ್ಕೆ
ನಿತ್ಯ ಅನಿತ್ಯವನೇ ತಿಳಿದು
ಮರ್ತ್ಯ ಕೈಲಾಸವೆಂಬುದು ಭಕ್ತರಿಗೆ ಯುಕ್ತವಲ್ಲ
ನಿಶ್ಚಯ ತಾನರಿದು, ಅತ್ತಣ ಗೊತ್ತು ನಿಶ್ಚಯವಾಗಿ ನಿಂದಲ್ಲಿ
ಆ ಬಚ್ಚ ಬರಿಯ ಬಯಲಲ್ಲಿ ನಿನ್ನ ನೀನೆ ನೋಡಿಕೊ
ಎನ್ನಯ ಪ್ರಿಯ ಇಮ್ಮಡಿ **ನಿಃಕಳಂಕ ಮಲ್ಲಿಕಾರ್ಜುನಾ**

## ( ೧೦೧ )
## ತಾವರೆ ಮುತ್ತುಗಳಂತೆ ಅಲಿಪ್ತ

ಕುಂಡಲಿಗನ ಕೀಟದಂತೆ,
ಮೈ ಮಣ್ಣಾಗದಂತೆ ಇರ್ದೆಯಲ್ಲಾ ಬಸವಣ್ಣಾ !
ಜಲದೊಳಗಣ ತಾವರೆಯಂತೆ,
ಹೊದ್ದಿ ಹೊದ್ದದಂತೆ ಇರ್ದೆಯಲ್ಲಾ ಬಸವಣ್ಣಾ !
ಜಲದಿಂದಾದ ಮೌಕ್ತಿಕದಂತೆ,
ಜಲವು ತಾನಾಗದಂತೆ ಇರ್ದೆಯಲ್ಲಾ ಬಸವಣ್ಣಾ
**ಗುಹೇಶ್ವರಲಿಂಗ**ದಾಣತಿ ವಿಡಿದು,

( ೧೦೨ )
## ಮಲರಹಿತ

ಉರಿಯೊಳಗಣ ಕರ್ಪುರಕ್ಕೆ ಕರಿಯುಂಟೇ ಅಯ್ಯ ?
ಬಯಲ ಮರೀಚಿಯ ಜಲಕ್ಕೆ ಕೆಸರುಂಟೇ ಅಯ್ಯ ?
ವಾಯುನಪ್ಪಿದ ಪರಿಮಳಕ್ಕೆ ನಿರ್ಮಾಲ್ಯವುಂಟೇ ಅಯ್ಯ ?
ನೀನು ನೆರೆ ಬಲಿದ ಬಳಿಕ, ಎನಗೆ ಭವವುಂಟೇ ?
**ಕೂಡಲಸಂಗಮದೇವ** ನಿಮ್ಮ ಚರಣಕಮಲದೊಳಗೆ
ಎನ್ನನಿಂಬಿಟ್ಟುಕೊಳ್ಳಯ್ಯ !

( ೧೦೩ )
## ಮಹಾಭಕ್ತನ ಹೃದಯದಲ್ಲಿ ಶಿವ

ಶಮೆ, ದಮೆ, ವಿವೇಕ, ವೈರಾಗ್ಯ,
ಪರಿಪೂರ್ಣಭಾವ, ಶಾಂತಿ,
ಕಾರುಣ್ಯ, ಶ್ರದ್ಧೆ, ಸತ್ಯ, ಸದ್ಭಕ್ತಿ,
ಶಿವಜ್ಞಾನ, ಶಿವಾನಂದ ಉದಯವಾದ
ಮಹಾಭಕ್ತನ ಹೃದಯಲ್ಲಿ ಶಿವನಿಪ್ಪ
ಆತನ ದರ್ಶನ ಸ್ಪರ್ಶನ ಸಂಭಾಷಣೆಯಿಂದ,
ಮುಕ್ತಿಯಪ್ಪುದು ತಪ್ಪದಯ್ಯ
**ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ**

( ೧೦೪ )
## ಶರಣನ ವಚನ ಪರಮಾಮೃತ

ಕಾಮಧೇನುವಿನಲ್ಲಿ ಕಲ್ಪಿಸಿದ ಸವಿಯಿಪ್ಪುದಲ್ಲದೆ,
ಮರ್ತ್ಯದ ಪಶುವಿನಲ್ಲಿ ಉಂಟೇ ಅಯ್ಯ ?
ಮಹಾಶೇಷನಲ್ಲಿ ಮಾಣಿಕ್ಯ ಪ್ರಭಾವಿಸುತ್ತಿಪ್ಪುದಲ್ಲದೆ,
ಕೆರೆಯೊಳಗಣ ಒಳ್ಳೆಯಲ್ಲಿ ಉಂಟೇ ಅಯ್ಯ ?

ವಾರಣದ ಕುಂಭಸ್ಥಳದಲ್ಲಿ, ಮೌಕ್ತಿಕ ಬೆಳಗುತಿಪ್ಪುದಲ್ಲದೆ,
ಊರ ಹಂದಿಯಲ್ಲಿ ಉಂಟೇ ಅಯ್ಯ ?
ಶರಣರ ಮನೋಮಧ್ಯದಲ್ಲಿ ಶಿವನು ಮೂರ್ತಿಗೊಂಡು,
ಆ ಶರಣರ ಜಿಹ್ವೆಯಕೊನೆಯ ಮೊನೆಯ ಮೇಲೆ,
ವಚನವೆಂಬ ಪರಮಾಮೃತವ ಕರೆದು,
ಕೆಲಬಲದ ಗಣಂಗಳಿಗೆ ಸವಿಯ ತೋರಿ,
ಆ ಶರಣರಲ್ಲಿ ಪರಿಪೂರ್ಣನಾಗಿಪ್ಪನಲ್ಲದೆ,
ದ್ವೈತಾದ್ವೈತಿಗಳೆಂಬವರಲ್ಲಿ ಉಂಟೇ
**ಘನಲಿಂಗಿಯ** ಮೋಹನ **ಚನ್ನಮಲ್ಲಿಕಾರ್ಜುನಾ**

## ( ೧೦೫ )
## ಮಾಡಿಮಾಡದವ

ಮಾಡುವಂತಿರಬೇಕು, ಮಾಡದಂತಿರಬೇಕು
ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು
**ಕೂಡಲಸಂಗಮದೇವ**ರ ನೆನೆವುತ್ತ ನೆನೆವುತ್ತ
ನೆನೆಯದಂತಿರಬೇಕು

## ( ೧೦೬ )
## ಆನಂದದ ಅತಿರೇಕ

ಕಂಗಳು ಚೆಲುವನ ನೋಡಿ,
ಕರ್ಣಂಗಳು ವಾರುತೆಯ ಕೇಳಿ
ಹಿಂಗದೆ ನಾಮವ ವದನದಿ ಸವಿಯುತ್ತೆ,
ಪದಂಗಳ ಮನದಿ ನೆನೆನೆನೆದು,
ರೋಮಂಗಳು ಪುಳಕಿತನಾಗಿ,
ಲೋಕಂಗಳ ಕಡಲೊಳು ಮುಳುಗಿ,
ಮೈಯುಬ್ಬಿ ಕೊಬ್ಬುತ್ತ,

ಅಂಗವ ಮರೆದಾನಂದದಿ;
ರಂಗಾ ಎನುತಿದ್ದರೆ ಸಾಲದೆ ?
ಮಂಗಳ ಜಯವನ್ನು ಕರುಣಿಸೋ !
ಮತ್ತೊಂದು ಸಂಗವನೊಲ್ಲೆನೋ
ಸಿರಿಕೃಷ್ಣರಾಯ !

—ವ್ಯಾಸರಾಯರು

—ಃ ಜೈಹಿಂದ್ ಃ—

# ಅನುಬಂಧ ೧

## ಸಂತ — ಕವಿಗಳು

| | ಹೆಸರು | ಮುದ್ರಿಕೆ | ಪದ–ಪದ್ಯ–ವಚನಗಳು |
|---|---|---|---|
| ೧ | ಕನಕದಾಸ | ಕಾಗಿನೆಲೆಯಾದಿಕೇಶವ | ೫-೧೧-೧೩-೨೧-೫೦-೫೫-೫೬-<br>-೫೭-೬೯- |
| ೨ | ಕಲ್ಯಾಣಕೀರ್ತಿ | — | [೫][೮][೨೩][೩೦] |
| ೩ | ಕೃಷ್ಣರಾಯ | ಗುರು ಮಹಿಪತಿ | -೬-೩೧- |
| ೪ | ಗೋಪಾಲದಾಸ | ಗೋಪಾಲ ವಿಠಲ | -೪೧-೪೪- |
| ೫ | ಚಂದಿಮರಸ | ನಿಮ್ಮುಲಗೆಯ ಚೆನ್ನರಾಮ | (೪೮) |
| ೬ | ಚೆನ್ನಬಸವ | ಕೂಡಲ ಚನ್ನಸಂಗಮದೇವ | (೯೮)(೧೦೨)(೧೦೫) |
| ೭ | ಜಗನ್ನಾಥದಾಸ | ಜಗನ್ನಾಥವಿಠಲ | -೪೩-<br>[೩] |
| ೮ | ದೇವರದಾಸಿಮಯ್ಯ | ರಾಮನಾಥಾ | (೪)(೫)(೬)(೧೦)(೨೯)(೩೦)<br>(೩೭)(೪೬)(೪೭)(೮೩)(೮೮)<br>(೯೨)(೯೬) |
| ೯ | ನಾಗರಸ | — | [೨೮] |
| ೧೦ | ನಿಜಗುಣಿ | ಶಂಭುಲಿಂಗ | -೩೨-೬೫-<br>[೧೮] |
| ೧೧ | ನಿಂಬರಗಿ ಮಹಾರಾಜ | ಗುರುಲಿಂಗಜಂಗಮ –ಆತ್ಮದೇವ | -೪-೧೭-೩೩-<br>[೬][೧೫] |
| ೧೨ | ಪುರಂದರದಾಸ | ಪುರಂದರವಿಠಲ | -೧೬-೧೯-೨೦-೨೪-೨೫-೩೬-<br>-೩೮-೩೯-೪೦-೪೨-೪೬-೪೮-<br>-೪೯-೫೨-೫೪-೬೭-೭೦-೭೧-<br>-೭೫-<br>(೪೧)(೫೦)(೫೮)(೫೯)(೭೧) |
| ೧೩ | ಪ್ರಭುದೇವ | ಗುಹೇಶ್ವರಾ | -೬೦-<br>(೩)(೧೯)(೨೦)(೫೧)(೮೮)<br>(೯೪)(೯೫)(೯೭)(೧೦೧) |

| | ಹೆಸರು | ಮುದ್ರಿಕೆ | ಪದ–ಪದ್ಯ–ವಚನಗಳು |
|---|---|---|---|
| ೧೪ | ಬಸವಣ್ಣ | ಕೂಡಲಸಂಗಮದೇವಾ | (೧)(೧೧)(೧೨)(೧೩)(೧೪) (೧೫)(೧೬)(೧೭)(೧೮)(೨೧) (೨೨)(೨೩)(೨೪)(೨೫)(೩೫) (೩೮)(೩೯)(೪೦)(೫೪)(೫೫) (೬೧)(೬೨)(೬೩)(೬೫)(೬೬) (೬೭)(೬೮)(೬೯)(೭೦)(೭೨) (೭೪)(೭೭)(೭೮)(೭೯)(೮೪) (೮೫)(೯೦)(೯೧) |
| ೧೫ | ಮಹಾದೇವಿಯಕ್ಕ | ಚೆನ್ನಮಲ್ಲಿಕಾರ್ಜುನಾ | (೨)(೭)(೮)(೨೬)(೨೮)(೩೧) (೩೨)(೩೩)(೩೪)(೩೬)(೪೨) (೪೩)(೪೪)(೪೫)(೫೬)(೭೩) (೭೫) (೭೬)(೮೦)(೯೯)(೧೦೦) (೧೦೪) |
| ೧೬ | ಮಹಾಲಿಂಗರಂಗ | — | [೧೧][೧೬] |
| ೧೭ | ಮಹಿಪತಿ | ಮಹಿಪತಿ | -೧೨-೨೬-೨೭-೫೩-೬೩-೬೬- -೭೨-೭೩- [೭] |
| ೧೮ | ಮೋಳಿಗೆಯ ಮಾರಯ್ಯ | ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ | (೧೦೩) |
| ೧೯ | ರತ್ನಾಕರವರ್ಣಿ | — | [೧೨][೧೩][೧೯][೨೦][೨೨] [೨೯][೩೧] |
| ೨೦ | ವಿಜಯದಾಸ | ವಿಜಯವಿಠಲ | -೪೭-೫೧-೬೮-೭೪- (೬೦) |
| ೨೧ | ವ್ಯಾಸರಾಯ | ಸಿರಿಕೃಷ್ಣರಾಯ | (೧೦೬) |
| ೨೨ | ಶಂಕರಾನಂದ | ಗುರುಮಹಾಲಿಂಗ | -೭-೮-೯-೧೦-೧೪-೧೫-೧೮- -೨೩-೨೯-೩೭-೬೧-೭೭-೭೮- [೧][೧೦] |
| ೨೩ | ಶೇರೀಫಸಾಹೇಬ | ಶಿಶುನಾಳಧೀಶ | -೭೬- |
| ೨೪ | ಷಡಕ್ಷರಿ | ಷಡಕ್ಷರಿಲಿಂಗ | -೩-೨೮-೪೫-೫೮- |

| | ಹೆಸರು | ಮುದ್ರಿಕೆ | ಪದ–ಪದ್ಯ–ವಚನಗಳು |
|---|---|---|---|
| ೨೫ | ಷಣ್ಮುಖಸ್ವಾಮಿ | ಅಖಂಡೇಶ್ವರ | (೯)(೪೯)(೫೭)(೮೨)(೮೬) (೮೯)(೯೧)(೭೬) |
| ೨೬ | ಸರಳೇಶ ಮಾದರಸ | ಸರಳೇಶ್ವರದೇವ | (೨೭)(೯೩) |
| ೨೭ | ಸರ್ಪಭೂಷಣ | ಗುರುಸಿದ್ಧ | -೨-೨೨-೩೪-೬೨- |
| ೨೮ | ಸರ್ವಜ್ಞ | ಸರ್ವಜ್ಞ | [೪][೯][೧೪][೧೭][೨೧][೨೫ |
| ೨೯ | ಪರಿಹರ | — | [೨೭] |
| ೩೦ | ಹಾವಿನಹಾಳ ಕಲ್ಲಯ್ಯ | ಮಹಾಲಿಂಗ ಕಲ್ಲೇಶ್ವರದೇವರು | (೫೭)(೫೩) |
| ೩೧ | ? | ಚಿದಾನಂದ | -೬೪- [೩೨] |
| ೩೨ | ? | ನಿಜಲಿಂಗ ಭವಭಂಗ ಶರಣಜನ ಭಕ್ತಸಂಗಾ | [೨][೨೪][೨೫][೨೬] |
| ೩೩ | ? | ಗುರುಭವತಾರಕ | -೩೦-೩೫- |
| ೩೪ | ? | ಸ್ವತಂತ್ರ ಸಿದ್ಧಲಿಂಗೇಶ್ವರ | (೬೪) |

---

ಸೂಚನೆ:—ಮೇಲೆ ಕಾಣಿಸಿದ ಕಂಸಗಳ ಸಂಕೇತಗಳು ಕೆಳಗಿನಂತೆಇವೆ.

- - = ಪದಗಳು; [ ] = ಪದ್ಯಗಳು; ( ) = ವಚನಗಳು.

